ಸಂಪುಟ ೧೩ ಸಂಚಿಕೆ ೩ ಸೆಪ್ಟೆಂಬರ್ 1992

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

ಬ್ಯಾಂಕಿಂಗ್ ಪ್ರಪಂಚ

ಸೆಪ್ಟೆಂಬರ್ 1992

# ಯುರೋಪಿಯನ್ ಕರೆನ್ಸಿ ಬಿಕ್ಕಟ್ಟು

**ಪ್ರಪಂಚದಲ್ಲಿ** ಈಗ ಪರಸ್ಪರ ವಿರುದ್ಧ ಎನಿಸಬಹುದಾದ ಎರಡು ವಿದ್ಯಮಾನಗಳು ಕಂಡುಬರುತ್ತಿವೆ. ಒಂದು, ಏಕೀಕರಣ ಪ್ರಯತ್ನ; ಇನ್ನೊಂದು, ಛಿದ್ರೀಕರಣ ಪ್ರವೃತ್ತಿ. ಮೊದಲನೆಯುದು ಆದರ್ಶದಿಂದ ಹೊಮ್ಮಿದ್ದು, ಸ್ವಾರ್ಥದಿಂದ ಪ್ರೇರಿತವಾದದ್ದಲ್ಲವೆಂದೂ ಹೇಳುವಂತಿಲ್ಲ. ಎರಡನೆಯುದೂ ಸ್ವಾರ್ಥಮೂಲವಷ್ಟೇ ಅಲ್ಲ, ಅದಕ್ಕೂ ಅದರದೇ ಆದ ಆದರ್ಶವುಂಟು. ರಾಜಕೀಯವಾಗಿ, ಆರ್ಥಿಕವಾಗಿ ಎಲ್ಲ ದೇಶಗಳೂ ಒಂದಾಗ ದಿದ್ದರೆ ಭವಿಷ್ಯ ನೆಟ್ಟಗಿರಲಿಕ್ಕಿಲ್ಲ ಎಂಬ ಮನವರಿಕೆ ಎಲ್ಲರಿಗೂ ಆಗುತ್ತಿದೆ. ಈ ಏಕೀಕರಣದ ಹಿಂಬದಿಯಲ್ಲಿ ತಂತಮ್ಮ ಬೇಳೆಯನ್ನು ಸ್ವಲ್ಪ ಹೆಚ್ಚಾಗಿ ಬೇಯಿಸಿಕೊಳ್ಳಬೇಕೆಂಬ ಸ್ವಾರ್ಥ ಬುದ್ಧಿಯೂ ಇಲ್ಲದಿಲ್ಲ. ಎಲ್ಲ ದೇಶಗಳೂ ಎಲ್ಲ ಪ್ರದೇಶಗಳೂ ಒಂದಾಗಿಬಿಟ್ಟರೆ ತಮ್ಮ ವೈಶಿಷ್ಟ್ಯವೆಲ್ಲಿ ಉಳಿದೀತು? ತಮ್ಮ ಹಿತಸಾಧನೆ ಹೇಗೆ ಆದೀತು? ಸಮಷ್ಟಿಯಲ್ಲಿ ವ್ಯಷ್ಟಿ ಕರಗಿಹೋದೀತು, ಕೊಚ್ಚಿಹೋದೀತು. ಬಲಿಷ್ಠವಾದ ಅಂಗಗಳು ತಮ್ಮ ಹಿತಸಾಧನೆಗಾಗಿ ಉಳಿದವನ್ನು ಬಲಿಕೊಡಬಹುದು ಎಂಬ ಅಂಜಿಕೆಯೂ ಉಂಟು. ಆದ್ದರಿಂದಲೇ ಏಕೀಕರಣ ಪ್ರವೃತ್ತಿ ಎಷ್ಟು ಪ್ರಬಲವಾಗಿದೆಯೋ, ಛಿದ್ರೀಕರಣ ಪ್ರವೃತ್ತಿಯೂ ಅಷ್ಟೇ ಪ್ರಬಲವಾಗಿದೆ. ಸಮಷ್ಟಿಯಲ್ಲಿ ವ್ಯಷ್ಟಿ ವೈಶಿಷ್ಟ್ಯವನ್ನುಳಿಸಿಕೊಳ್ಳುವ ಹಾದಿಯ ಅನ್ವೇಷಣೆಯೂ ನಡೆದೇ ಇದೆ.

ವಿಜ್ಞಾನ-ತಂತ್ರವಿದ್ಯೆಗಳ ಮುನ್ನಡೆಯೂ ಏಕವಿಶ್ವದ ಅನಿವಾರ್ಯತೆಯನ್ನು ಎತ್ತಿ ಹೇಳುತ್ತಿದೆ. ಪ್ರಪಂಚದ ದೂರದೂರದ ಸ್ಥಳಗಳು ಎಷ್ಟೆಷ್ಟು ಹತ್ತಿರಕ್ಕೆ ಬಂದಿವೆಯೆಂದರೆ, ಇಡೀ ಭೂಮಿಯೇ ಇಂದು ಒಂದು ಹಳ್ಳಿಯಂತಾಗಿದೆಯೆಂದು ಮೆಕ್ ಲೂಹನ್ ಅವರು ಹೇಳಿದ್ದಾರೆ. ಇದರಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ. ಈ ನಿಕಟತೆಯಿಂದಾಗಿ ಏಕತೆಯನ್ನು ಸಾಧಿಸುವುದು, ಒಟ್ಟಾಗಿ ಬಾಳುವುದು ಅನಿವಾರ್ಯವೆನಿಸಿದೆ. ಹೊಸ ವಿಶ್ವ ಅರ್ಥವ್ಯವಸ್ಥೆಯ ಕನಸು ಇದರ ಇನ್ನೊಂದು ಮುಖ. ದೇಶಗಳ ನಡುವಣ ಅನಾಹುತಕಾರಿ ಸ್ಪರ್ಧೆಯನ್ನು ತಪ್ಪಿಸುವ, ಆರ್ಥಿಕವಾಗಿ ಅವನ್ನು ಒಂದುಗೂಡಿಸುವ, ವಿಶ್ವಕ್ಕೆಲ್ಲ ಒಂದೇ ಹಣವ್ಯವಸ್ಥೆಯನ್ನು ತರುವ ಪ್ರಯತ್ನಗಳೂ ನಡೆದೇ ಇವೆ.

ಎರಡನೆಯ ಮಹಾಯುದ್ಧದ ನಡುವೆ—1944ರಲ್ಲಿ—ಅಮೆರಿಕದ ಬ್ರೆಟನ್ ವೂಡ್ಸ್‌ನಲ್ಲಿ ಸೇರಿದ್ದ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಈ ನಿಟ್ಟಿನಲ್ಲಿ ಒಂದು ಪ್ರಮುಖ ಹೆಜ್ಜೆ ಇಡಲಾಯಿತು. ಆ ಸಮ್ಮೇಳನದ ನಿರ್ಣಯಕ್ಕೆ ಅನುಗುಣವಾಗಿ ವಿಶ್ವ ಬ್ಯಾಂಕ್ ಮತ್ತು ಅಂತರರಾಷ್ಟ್ರೀಯ ಹಣ ನಿಧಿಗಳು ಸ್ಥಾಪಿತವಾದುವು. ಯುದ್ಧಜರ್ಜರಿತವಾದ ದೇಶಗಳ ಆರ್ಥಿಕ ಪುನರ್ರಚನೆ ಮತ್ತು ಎಲ್ಲ ದೇಶಗಳ ಅಭಿವೃದ್ಧಿಯ ಹೊಣೆ ವಿಶ್ವ ಬ್ಯಾಂಕಿನದಾಯಿತು. ಅದರ ವಿಸ್ತೃತ ಹೆಸರೇ ಈ ಹೊಣೆಯನ್ನು ಸೂಚಿಸುತ್ತದೆ. ವಿವಿಧ ದೇಶಗಳ ನಾಣ್ಯಗಳ ಪರಸ್ಪರ ವಿನಿಮಯ ಮೌಲ್ಯಗಳು ಅಹನ್ಯಹನಿ ಚಲನೆಗಳಿಗೆ ಒಳಗಾಗದೆ ಸ್ಥಾಯಿಯಾಗಿರುವಂತೆ ನೋಡಿಕೊಳ್ಳುವುದು ಅಂತರರಾಷ್ಟ್ರೀಯ ಹಣ ನಿಧಿಯ ಹೊಣೆಯಾಯಿತು. ಆಗ ಡಾಲರಿಗೆ ವಿಶ್ವಮಾನ್ಯತೆ ಇದ್ದದ್ದರಿಂದ (ಈಗಲೂ ಹೋಗಿಲ್ಲ) ಡಾಲರಿನ ಲೆಕ್ಕದಲ್ಲಿ ವಿವಿಧ ದೇಶಗಳ ನಾಣ್ಯಗಳ ಮೌಲ್ಯಗಳನ್ನು ನಿರ್ಧರಿಸಲಾಯಿತು. ಡಾಲರು ಆಗ ಚಿನ್ನಕ್ಕೆ ಮುಕ್ತ ಪರಿವರ್ತನೆಯಾಗುವ ಗುಣ ಹೊಂದಿತ್ತು. ವಿವಿಧ ನಾಣ್ಯಗಳ ಸುವರ್ಣ ಮೌಲ್ಯವನ್ನೂ ಅಂತೆಯೇ ನಿರ್ಧರಿಸಲಾಗಿತ್ತು. ಅವುಗಳ ವಿನಿಮಯ ಮೌಲ್ಯಗಳು ನಿಗದಿಯಾದ ಈ ಮಟ್ಟಗಳಿಂದ ಆಚೀಚೆ ಒಂದು ಮಿತಿಯನ್ನು ಮೀರಿ ಚಲಿಸದಂತೆ ನೋಡಿಕೊಳ್ಳುವುದು ವಿವಿಧ ಸದಸ್ಯ ದೇಶಗಳ ಜವಾಬ್ದಾರಿಯಾಯಿತು. ಈ ಸ್ಥಾಯಿತ್ವವನ್ನು ಸಾಧಿಸಲು ಹಣ ನಿಧಿಯ ನೆರವು ಸಿದ್ಧವಿತ್ತು. ಒಂದು ರೀತಿಯಲ್ಲಿ ಅಖಿಲ ವಿಶ್ವ ಹಣ ವ್ಯವಸ್ಥೆಯ ದಿಕ್ಕಿನಲ್ಲಿ ಇಟ್ಟ ಒಂದು ಹೆಜ್ಜೆಯಿದು ಎನ್ನಬಹುದು. ಸರ್ವತ್ರ ಮಾನ್ಯತೆ ಪಡೆದ ಡಾಲರು ಒಂದು ಸೀಮಿತ ಅರ್ಥದಲ್ಲಿ ವಿಶ್ವದ ನಾಣ್ಯದ ಯೋಗ್ಯತೆ ಪಡೆದುಕೊಂಡಿತ್ತೆನ್ನಬಹುದು. ವಿಶ್ವಮಾನ್ಯವಾದ ಒಂದು ಕರೆನ್ಸಿ ವ್ಯವಸ್ಥೆಯನ್ನು—ಚಲಾರ್ಥ ವ್ಯವಸ್ಥೆಯನ್ನು—ಜಾರಿಗೆ ತರಬೇಕೆಂಬುದು ಒಂದು ದೂರದ ಕನಸಾಗಿತ್ತು.

ಆದರೆ ಹಣ ನಿಧಿಯ ಅಧೀಕ್ಷತೆಯ ಈ ವ್ಯವಸ್ಥೆ ಬಹಳ ಕಾಲ ಸಮರ್ಪಕವಾಗಿ ಮುಂದುವರಿಯಲಾರದೆ ಹೋಯಿತು. ಯಾವುದೇ ದೇಶದ ಆರ್ಥಿಕ ಹಿತಸಾಧನೆಗೆ ಅದರ ನಾಣ್ಯದ ಮೌಲ್ಯದ ಸ್ಥಿರತೆ ಒಂದು ಸಾಧನ ಮಾತ್ರ. ಅದೇ ಅಂತಿಮ ಗುರಿಯಲ್ಲ. ದೇಶದಲ್ಲಿ ತೀವ್ರ ಬದಲಾವಣೆಗಳಾದಾಗ, ಉತ್ಪಾದನೆ ಉದ್ಯೋಗ ವರಮಾನ ಮುಂತಾದವೆಲ್ಲ ವ್ಯತ್ಯಾಸಗೊಂಡಾಗ, ಅಂತರಿಕವಾಗಿ ಅದರ ನಾಣ್ಯದ ಮೌಲ್ಯ ಹೆಚ್ಚು ಕಡಮೆಯಾಗುತ್ತದೆ, ಬೆಲೆಗಳು ಏರಿಳಿಯುತ್ತವೆ. ಅದರ ಕೊಳ್ಳುವ ಶಕ್ತಿಯ ಏರಿಕೆ ಅಥವಾ ಇಳಿತಾಯ ಆಗುತ್ತದೆ. ಅಂತರಿಕವಾಗಿ ಈ ಏರಿಳಿತಗಳಾದಾಗ ಬಾಹ್ಯವಾಗಿಯೂ ಆ ದೇಶದ ನಾಣ್ಯದ ಮೌಲ್ಯದಲ್ಲಿ ಈ ವ್ಯತ್ಯಾಸ ಪ್ರತಿಫಲಿತವಾಗಲೇಬೇಕು. ಅಂತಿಮವಾಗಿ ವಿವಿಧ ದೇಶಗಳ ನಾಣ್ಯಗಳ ಪರಸ್ಪರ ಮೌಲ್ಯಗಳು ಅವುಗಳ ಕೊಳ್ಳುವ ಶಕ್ತಿಗೆ ಅನುಗುಣವಾಗಿಯೇ ತಂತಮ್ಮ ನೆಲೆಗಳನ್ನು ಕಂಡುಕೊಳ್ಳಲೇಬೇಕು. ಹಾಗಾಗಲು ಬಿಡದೆ ಕೃತಕ ವಿಧಾನಗಳಿಂದ ಒಂದು ನಿಶ್ಚಿತ ನೆಲೆಗೆ ಅವನ್ನು ಗಂಟು ಹಾಕಲು ಯತ್ನಿಸಿದರೆ ಅದು ಬಹುಕಾಲ ಯಶಸ್ಸು ಗಳಿಸಲಾರದು. ಅಂತೆಯೇ ಬಹಳ ಬೇಗ ಅಂತರರಾಷ್ಟ್ರೀಯ ಹಣ ನಿಧಿಯ ಕಟ್ಟುಪಾಡುಗಳಲ್ಲಿ ಬಿರುಕುಗಳು ಕಾಣಿಸಿಕೊಂಡುವು. ಇಪ್ಪತ್ತು ವರ್ಷಗಳಿಗೂ ಹಿಂದೆ ಈ ಪರಿಸ್ಥಿತಿ ಬಲು ತೀವ್ರವಾಗಿ ಕಾಣಿಸಿಕೊಂಡಿತು. ಬಲಾಢ್ಯವಾದ ಡಾಲರ್ ನಾಣ್ಯವೇ ಚಿನ್ನಕ್ಕೆ ಪರಿವರ್ತನೀಯತೆಯನ್ನು ಕಳೆದುಕೊಂಡಿತು. ವಿವಿಧ ದೇಶಗಳ ನಾಣ್ಯಗಳ ವಿನಿಮಯ ದರಗಳನ್ನು ಮತ್ತೆ ನಿರ್ಧರಿಸಲಾಯಿತು. ಅವು ಆಚೀಚೆ ಚಲಿಸಲು ಇನ್ನಷ್ಟು ಹೆಚ್ಚಿನ ಅಂತರವನ್ನು ನಿಗದಿಪಡಿಸಲಾಯಿತು. ಕೊನೆಗೆ ಇದೂ ಸಾಧ್ಯವಾಗಲಿಲ್ಲ. ಅಂತಿಮವಾಗಿ ಹಲವು ದೇಶಗಳ ನಾಣ್ಯಗಳು ಚಲನಾತ್ಮಕವಾದುವು. ಅನಿಶ್ಚಿತತೆ ವ್ಯಾಪಕವಾಗಿ ಹಬ್ಬಿತು. ಮುಂದುವರಿದ ದೇಶಗಳ ಕಥೆ ಇದು. ಅಭಿವೃದ್ಧಿಶೀಲ ದೇಶಗಳ ಪಾಡು ಹೇಳಬೇಕಾದ್ದೇ ಇಲ್ಲ. ಅವು ನಿರಂತರವಾಗಿ ಪ್ರತಿಕೂಲ ವ್ಯಾಪಾರ ಪರಿಸ್ಥಿತಿಗೆ ಒಳಗಾಗಿ, ಆಮದು-ರಫ್ತುಗಳನ್ನಾಗಲಿ ಪಾವತಿಗಳನ್ನಾಗಲಿ ಸರಿದೂಗಿಸಿಕೊಳ್ಳಲಾಗದೆ ಸದಾ ಅಸಮತೋಲಕ್ಕೊಳಗಾಗಿ, ಈ ಅಂತರವನ್ನು ತುಂಬಲು ಅಂತರರಾಷ್ಟ್ರೀಯ ಹಣ ನಿಧಿಯ ಬಾಯ್ದಂಬುಲಕ್ಕೆ ಕೈಯೊಡ್ಡುತ್ತಾ, ಆಗಾಗ ಅದರಿಂದ ವಿಸ್ತೃತ ಉದರಿ ನೆರವನ್ನು ಬೇಡುತ್ತಾ ಚಿಂತಾಜನಕ ಸ್ಥಿತಿಯಲ್ಲೇ ಮುಂದುವರಿಯುತ್ತ ಬಂದಿವೆ.

ವಿಶ್ವ ಅರ್ಥವ್ಯವಸ್ಥೆಯನ್ನು, ಅದಕ್ಕೆ ಆಧಾರವಾಗಿ ಹಣ ವ್ಯವಸ್ಥೆಯನ್ನು, ಒತ್ತಾಗಿ ಹೆಣೆಯುವ ಪ್ರಯತ್ನ ಹೆಚ್ಚು ಹೆಚ್ಚು ಕಷ್ಟಕರವಾಗಿ ಪರಿಣಮಿಸುತ್ತಿದ್ದಂತೆಯೇ ಪ್ರಾದೇಶಿಕವಾಗಿ ವಿವಿಧ ದೇಶಗಳು ಒಂದಾಗುವ, ತಮ್ಮವೇ ಆದ ಗುಂಪುಗಳನ್ನು ರಚಿಸಿಕೊಳ್ಳುವ, ಯತ್ನ ಮುಂದುವರಿದಿತ್ತು. ಪೂರ್ವ-ಪಶ್ಚಿಮ ಶಕ್ತಿಬಣಗಳು ಬಹಳ ಸ್ಥೂಲವಾದ ಅರ್ಥದಲ್ಲಿ ಇಂಥ ವ್ಯವಸ್ಥೆಗಳು. ಸೋವಿಯತ್ ಒಕ್ಕೂಟದ ಪತನ ಹಾಗೂ ಪೂರ್ವ ಯುರೋಪಿಯನ್ ರಾಷ್ಟ್ರಗಳ ನೂರಾಬಟ್ಟೆಯಿಂದಾಗಿ ಬಂದು ಬಣ ಮುರಿದು ಬಿತ್ತು. ಇನ್ನೊಂದು ಶಕ್ತಿಬಣ ತನ್ನ ಅರ್ಥ ಕಳೆದುಕೊಂಡಿತು. ಎರಡು ಧ್ರುವಗಳ ವಿಶ್ವ ಏಕ ಧ್ರುವಯುಕ್ತ ವ್ಯವಸ್ಥೆಯಾಗುವ ರೀತಿಯಲ್ಲಿ ಪರಿಣಾಮಗೊಂಡಿತ್ತು. ಆದರೆ ಇದರೊಳಗಿನ ವಿವಿಧ ದೇಶಗಳ ವಿಭಿನ್ನ ಹಿತಗಳು, ಪರಸ್ಪರ ಅಂಜಿಕೆಗಳು,

ಸ್ಪರ್ಧೆಗಳು—ಈ ಕಾರಣಗಳಿಂದಾಗಿ ಇದೊಂದು ಏಕಶಿಲಾವ್ಯವಸ್ಥೆಯಾಗಿ ಉಳಿಯುವ ಸೂಚನೆ ಕಂಡುಬರಲಿಲ್ಲ. ಬದಲಾಗಿ ಪ್ರಾದೇಶಿಕ ಸಂಘಟನೆಗಳು ಹೆಚ್ಚು ನಿಚ್ಚಳವಾಗಿ ಮೂಡುವ ಪ್ರವೃತ್ತಿ ಪ್ರಬಲವಾಯಿತು.

ಪೂರ್ವ-ಪಶ್ಚಿಮ ಬಣಗಳ ಇದಿರು-ಬದಿರುತನ ಅದೃಶ್ಯವಾಗುವ ಮುನ್ನವೇ ಪಶ್ಚಿಮ ಯೂರೋಪಿನ ದೇಶಗಳೆಲ್ಲ ಒಂದಾಗಿ ತಮ್ಮ ಸಮಾನ ಹಿತಗಳ ರಕ್ಷಣೆ ಪೋಷಣೆಗಳಿಗಾಗಿ ಒಂದು ವ್ಯವಸ್ಥೆಯನ್ನು ರಚಿಸಿಕೊಳ್ಳುವ ಯತ್ನ ಮುಂದುವರಿದಿತ್ತು. ಒಗ್ಗಟ್ಟಿನಲ್ಲಿ ಬಲವುಂಟು ಎಂಬ ತತ್ತ್ವವನ್ನು ಇವು ಕಂಡುಕೊಂಡಿದ್ದುವು. ಇಡೀ ವಿಶ್ವಕ್ಕೆ ಅನ್ವಯಿಸಲು ಯತ್ನಿಸಿ 1971ರಲ್ಲಿ ಕೈಬಿಟ್ಟ ಸ್ಥಿರ ವಿನಿಮಯ ದರ ವ್ಯವಸ್ಥೆಯನ್ನು ಪಶ್ಚಿಮ ಯೂರೋಪಿಯನ್ ದೇಶಗಳು ಪ್ರಾದೇಶಿಕವಾಗಿ ತಮ್ಮತಮ್ಮಲ್ಲೇ ಜಾರಿಗೆ ತರಲು 1979ರಲ್ಲಿ ಒಂದು ಒಡಂಬಡಿಕೆ ಮಾಡಿಕೊಂಡಿದ್ದುವು. ಯೂರೋಪಿಯನ್ ಹಣ ವ್ಯವಸ್ಥೆಯನ್ನು ರಚಿಸಿಕೊಳ್ಳಲು ಅವು ಮನಸ್ಸು ಮಾಡಿದುವು. ಈ ದೇಶಗಳ ನಾಣ್ಯಗಳ ನಡುವೆ ಪರಸ್ಪರವಾಗಿ ಸ್ಥಿರವಾದ ವಿನಿಮಯ ದರಗಳನ್ನು ನಿರ್ಧರಿಸಲಾಯಿತು. ಇವೆಲ್ಲ ಒಟ್ಟಾಗಿ ಒಂದು ಘಟಕವಾಗಿ ಇತರ ದೇಶಗಳೊಡನೆ ವ್ಯವಹಾರ ನಡೆಸುವುದು ಹೆಚ್ಚು ಲಾಭಕರ ಎಂಬುದನ್ನು ಕಂಡುಕೊಂಡುವು. ಈ ದೇಶಗಳೆಲ್ಲ ಮುಂದೆ ರಾಜಕೀಯವಾಗಿಯೂ ಒಂದಾಗಬೇಕು ; ಇವಕ್ಕೆಲ್ಲ ಮುಂದೆ ಸಾಮಾನ್ಯವಾದ ಒಂದೇ ನಾಣ್ಯವೂ ಚಲಾವಣೆಗೆ ಬರಬೇಕು—ಎಂಬುದು ಇವುಗಳ ಗುರಿ. ಕಳೆದ ವರ್ಷ ಮಾಸ್ಟ್ರಿಕ್ ಎಂಬಲ್ಲಿ ಈ ಬಗ್ಗೆ ಈ ದೇಶಗಳು ಒಡಂಬಡಿಕೆ ಮಾಡಿಕೊಂಡವು. ಸೂರ್ಯನೇ ಮುಳುಗದ ಸಾಮ್ರಾಜ್ಯದ ಒಡೆತನ ಹೊಂದಿದ್ದ ಬ್ರಿಟನ್ನು ತನ್ನ ಸಾಮ್ರಾಜ್ಯವನ್ನೆಲ್ಲ ಕಳೆದುಕೊಂಡು ಮೂರನೆಯ ದರ್ಜೆಯ ದೇಶವಾಗಿದ್ದರೂ ಯೂರೋಪೇ ಬೇರೆ ತಾನೇ ಬೇರೆ ಎಂಬ ಧೋರಣೆಯಿಂದ ಸ್ವಲ್ಪಕಾಲ ಈ ಯೂರೋಪಿಯನ್ ಹಣ ವ್ಯವಸ್ಥೆಗೆ ಸೇರಿಕೊಳ್ಳಲೊಲ್ಲದೆ ಬೇರೆಯೇ ಇರಲು ಯತ್ನಿಸಿತು. ಆದರೆ ಅದು ಸಾಧ್ಯವಿಲ್ಲವೆನಿಸಿ ಎರಡು ವರ್ಷ ಹಿಂದೆ ತಾನೂ ಈ ವ್ಯವಸ್ಥೆಯೊಳಗೆ ಸೇರಿಕೊಂಡಿತು. ಯೂರೋಪಿಯನ್ ಸಮುದಾಯದ ದೇಶಗಳ ನಡುವಣ ಸ್ಥಿರ ವಿನಿಮಯ ದರ ವ್ಯವಸ್ಥೆಗೆ ಬ್ರಿಟನ್ನೂ ಹೂಗುಟ್ಟಿತು. ಮಾಸ್ಟ್ರಿಕ್ ಒಡಂಬಡಿಕೆಯ ಪ್ರಕಾರ ಈ ಶತಮಾನದ ಅಂತ್ಯದ ವೇಳೆಗೆ ಇಡೀ ಸಮುದಾಯಕ್ಕೆ ಒಂದೇ ಕರೆನ್ಸಿ—ಚಲಾರ್ಥ—ಬರುವುದಿತ್ತು.

ಆದರೆ ಅಂತರ ರಾಷ್ಟ್ರೀಯ ಹಣ ನಿಧಿಯ ಆಶ್ರಯದಲ್ಲಿ ಪ್ರಪಂಚದ ವಿವಿಧ ದೇಶಗಳಿಗೆ ಅನ್ವಯಿಸುವಂತೆ ರೂಪಿಸಲಾದ ಸ್ಥಿರ ವಿನಿಮಯ ದರ ವ್ಯವಸ್ಥೆಯಲ್ಲಿ ಇಪ್ಪತ್ತು ವರ್ಷ ಹಿಂದೆ ಬಿರುಕು ಬಿಟ್ಟಂತೆ, ಈ ಪ್ರಾದೇಶಿಕ ಸ್ಥಿರ ವಿನಿಮಯ ದರ ವ್ಯವಸ್ಥೆಯಲ್ಲೂ ಬಿರುಕುಗಳು ಕಾಣಿಸಿಕೊಂಡಿವೆ. ಈ ವ್ಯವಸ್ಥೆಗೆ ಸೇರಿರುವ ವಿವಿಧ ದೇಶಗಳು ಆರ್ಥಿಕವಾಗಿ ಒಂದೇ ರೀತಿಯವಾಗಿಲ್ಲ. ಅವುಗಳ ಹಿತಗಳೂ ಪರಸ್ಪರ ಭಿನ್ನವಾದವು, ಕೆಲವೇಳೆ ಸ್ಪರ್ಧಾತ್ಮಕವಾದವು. ಅವುಗಳ ಬೆಳವಣಿಗೆಯ ಮಟ್ಟ ಒಂದೇ ರೀತಿಯಿಲ್ಲ. ಪ್ರತಿಯೊಂದು ದೇಶದಲ್ಲೂ ಅಸಮವಾಗಿ ವ್ಯತ್ಯಾಸಗಳಾಗುತ್ತಿರುತ್ತವೆ. ಉತ್ಪಾದನೆ, ಉದ್ಯೋಗ, ಹಣದ ಸೃಷ್ಟಿ, ವರಮಾನ ಎಲ್ಲವೂ ವಿಭಿನ್ನವಾಗಿ ಬದಲಾಗುತ್ತಿರುತ್ತವೆ. ಸಾಮೂಹಿಕ ಕವಾಯತಿನಲ್ಲಿ ಹೆಜ್ಜೆಗಳು ಹಿಂದೆ ಮುಂದೆ ಆಗುವುದು ಅನಿವಾರ್ಯ. ಆಂತರಿಕವಾಗಿ ಅವುಗಳ ನಾಣ್ಯಗಳ ಕೊಳ್ಳುವ ಶಕ್ತಿ ಬದಲಾದಾಗ ಸಾಪೇಕ್ಷವಾಗಿಯೂ ಅವುಗಳ ಪರಸ್ಪರ ವಿನಿಮಯ ದರ ಬದಲಾವಣೆ ಅನಿವಾರ್ಯ. ಒಂದೊಂದರ ಹಿತ ಒಂದೊಂದು ರೀತಿ.

ಈ ಸಮುದಾಯದಲ್ಲಿ ಜರ್ಮನಿ ಆರ್ಥಿಕವಾಗಿ ಅತ್ಯಂತ ಪ್ರಬಲ ದೇಶ. ಸಹಜವಾಗಿಯೇ ಅದರ ಮಾರ್ಕ್ ನಾಣ್ಯ ದೃಢವಾಗಿ ಬೆಳೆಯುತ್ತಿದೆ. ಅದೇ ಒಂದು ರೀತಿಯಲ್ಲಿ ಯೂರೋಪಿಯನ್ ಸಮುದಾಯದಲ್ಲಿ ಸಾರ್ವತ್ರಿಕ ಮಧ್ಯವರ್ತಿಯಾಗಿದೆ. ಅದರ ಏಕಪಕ್ಷೀಯ ವರ್ತನೆಯಿಂದ ಇತರ ದೇಶಗಳ ಹಿತ ಏರುಪೇರಾಗುವುದು ಸಹಜ.

ಪಶ್ಚಿಮ-ಪೂರ್ವ ಜರ್ಮನಿಗಳ ಏಕೀಕರಣದಿಂದ ಅಲ್ಲೊಂದು ವಿಶಿಷ್ಟ ಸಮಸ್ಯೆ ಉದ್ಭವಿಸಿದೆ. ಪೂರ್ವ ಜರ್ಮನ್ ಭಾಗದ ಆರ್ಥಿಕ ಬೆಳವಣಿಗೆಗಾಗಿ ಅದು ಅಗಾಧ ಬಂಡವಾಳ ಹೂಡಬೇಕಾಗಿದೆ. ಇದಕ್ಕಾಗಿ ಬಂಡವಾಳ ಆಕರ್ಷಿಸಲು ಅದು ಬಡ್ಡಿ ದರವನ್ನು ಏರಿಸಿ ಕೂರಿಸಿದೆ. ಜರ್ಮನ್ ಏಕೀಕರಣದಿಂದಾಗಿ ಆರ್ಥಿಕ ಸಮಸ್ಯೆಗಳು ತಲೆದೋರಿ, ಹಣ ಸೃಷ್ಟಿ ಅಧಿಕವಾಗಿ, ಬೆಲೆಗಳು ಏರಿ, ಅನಾಹುತವಾದೀತೆಂಬ ಅಂಜಿಕೆಯೂ ಅದಕ್ಕುಂಟು. ಎರಡು ಯುದ್ಧಗಳ ನಡುವೆ, ಒಂದನೆಯ ಯುದ್ಧದಲ್ಲಿ ಜರ್ಮನಿ ಪರಾಭವ ಹೊಂದಿದ ಮೇಲೆ, ಅಲ್ಲಿ ತೀವ್ರ ಬೆಲೆಯೇರಿಕೆ ಪ್ರವೃತ್ತಿ ಪ್ರಬಲವಾಗಿ ದೇಶವೇ ದಿವಾಳಿ ಏಳುವ ಸ್ಥಿತಿ ಬಂದಿತ್ತು. ಹಿಟ್ಲರನ ಆಗಮನಕ್ಕೆ ಅದು ಹಾದಿ ಮಾಡಿಕೊಟ್ಟಿತು. ಆ ನೆನಪು ಆ ದೇಶವನ್ನು ನಡುಗಿಸುತ್ತದೆ. ಹಾಗಾಗದಿರಲೆಂದೂ ಅದರ ಮುನ್ನೆಚ್ಚರಿಕೆ : ಹಣವನ್ನು ತುಟ್ಟಿಯಾಗಿಡಲು ಬಡ್ಡಿ ದರದ ಏರಿಕೆ.

ಇದರಿಂದಾಗಿ ಇತರ ದೇಶಗಳಿಂದ ಅಲ್ಲಿಗೆ ಬಂಡವಾಳ ಹರಿದುಹೋಗುತ್ತಿದೆ. ಅಧಿಕ ಬಡ್ಡಿ ದರದ ಆಕರ್ಷಣೆ ಅಷ್ಟೊಂದು. ಇದರಿಂದಾಗಿ ಜರ್ಮನ್ ಮಾರ್ಕಿಗೆ ಅಗಾಧ ಬೇಡಿಕೆ. ಅದರ ಇದಿರಿನಲ್ಲಿ ಇತರ ನಾಣ್ಯಗಳ ವಿನಿಮಯ ದರಗಳು ಏರುಪೇರಾಗುತ್ತಿವೆ. ಬ್ರಿಟನ್ನು ಈ ವ್ಯವಸ್ಥೆಯಿಂದ ಕಳಚಿಕೊಂಡಿದೆ. ಫ್ರಾನ್ಸ್ ಅಲುಗುತ್ತಿದೆ. ಇಟಲಿ ಕಂಗಾಲಾಗಿದೆ. ಏಕ ಕರೆನ್ಸಿ ವ್ಯವಸ್ಥೆಯ ಕನಸಿಗೇ ಪೆಟ್ಟು ಬಿದ್ದಿದೆಯೆನಿಸುತ್ತಿದೆ. ಪ್ರಥಮ ಚುಂಬನದಲ್ಲೇ ದಂತ ಭಗ್ನವೆ? ಎನಿಸುತ್ತಿದೆ.

ಆದರೆ ಏಕ ಕರೆನ್ಸಿ ವ್ಯವಸ್ಥೆ ಅನಿವಾರ್ಯವೆಂಬುದಕ್ಕೆ ಇದೂ ಒಂದು ನಿದರ್ಶನ ಎಂದು ವಾದಿಸುವವರೂ ಇದ್ದಾರೆ. ಬೇರೆಬೇರೆ ಚಲಾರ್ಥಗಳಿದ್ದು, ಅವುಗಳ ನಡುವೆ ಸ್ಥಿರ ವಿನಿಮಯ ದರ ಸಾಧಿಸಲು ಯತ್ನಿಸಿದ್ದರಿಂದ ಹೀಗಾಗಿದೆ. ಅದರ ಬದಲು ಒಂದೇ ಕರೆನ್ಸಿ ಇದ್ದರೆ ಏನೂ ತೊಂದರೆ ಇರದು. ಹಾಗಾಗಬೇಕೆಂಬುದಕ್ಕೆ ಇದು ಸೂಚನೆ—ಎಂದೂ ಹೇಳಲಾಗಿದೆ.

ಆದರೆ ಆಗಿನ ಏಕೀಕೃತ ವ್ಯವಸ್ಥೆಯಲ್ಲಿ ಜರ್ಮನಿಯೇ ಪ್ರಬಲ ಭಾಗವಾಗಿರುತ್ತದೆ; ಜರ್ಮನಿಯ ಹಿತಕ್ಕೆ ಅನುಗುಣವಾಗಿ ಇತರ ಭಾಗಗಳ ಹಿತಗಳು ನಿರ್ಧಾರವಾಗುತ್ತವೆ; ಇದು ಒಂದು ರೀತಿಯಲ್ಲಿ ವಿಸ್ತೃತ ಜರ್ಮನ್ ಪ್ರಭುತ್ವವೇ ಆಗುತ್ತದೆ ಎನ್ನುವವರೂ ಇದ್ದಾರೆ. ತಂತಮ್ಮ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಬಲಿಗೊಟ್ಟು, ಸಮುದ್ರದಲ್ಲಿ ಒಂದಾಗಿಹೋಗುವುದರಿಂದ ಏನು ಪ್ರಯೋಜನ? ಎಂದು ಇವರು ಪ್ರಶ್ನಿಸುತ್ತಾರೆ. ಇವರು ಈ ಸ್ಥಿತಿಯನ್ನೊಲ್ಲರು.

ಪ್ರಾದೇಶಿಕವಾಗಿಯಾಗಲಿ, ವಿಶ್ವವ್ಯಾಪಿಯಾಗಿಯಾಗಲಿ ಒಂದು ಸಮರ್ಪಕ ಹಾಗೂ ಸರ್ವಹಿತಪಾಲಕ ಕರೆನ್ಸಿ ವ್ಯವಸ್ಥೆಯ ರಚನೆ ಎಷ್ಟು ಕಷ್ಟಕರ ಎಂಬುದು ಯೂರೋಪಿಯನ್ ಕರೆನ್ಸಿ ಬಿಕ್ಕಟ್ಟಿನಿಂದ ಇನ್ನಷ್ಟು ಮನದಟ್ಟಾಗುತ್ತದೆ.

●

# ಷೇರುಪೇಟೆಯ ಮಹಾ ಮೋಸ

**ಹರ್ಷದ್ ಮೆಹ್ತಾ ಮತ್ತು ಗೆಳೆಯರು ಭಾರತದ ಷೇರು ಪೇಟೆಯಲ್ಲಿ ನಡೆಸಿದ ಇಂದ್ರಜಾಲ-ಮಹೇಂದ್ರಜಾಲದ ರೋಚಕ ಕಥೆಗಳು ಇನ್ನೂ ಬಿಚ್ಚಿಕೊಳ್ಳುತ್ತಲೇ ಇವೆ. ಜಪಾನಿನ ಹಿರೋಷಿಮಾ-ನಾಗಸಾಕಿ ನಗರಗಳ ಮೇಲೆ ಎರಡನೆಯ ಮಹಾಯುದ್ಧದ ಕಾಲದಲ್ಲಿ ಸಿಡಿದ ಪರಮಾಣು ಬಾಂಬುಗಳಂತೆ ಈ ಮಹಾಸ್ಫೋಟದ ವಿಕಿರಣಕ್ರಿಯೆಯ ವಿವರಣೆ ಈ ಲೇಖನದಲ್ಲಿದೆ.**

**ಸಿ. ಗೋವಿಂದಾಚಾರ್**
ವಾಣಿಜ್ಯಶಾಸ್ತ್ರ ಪ್ರಾಧ್ಯಾಪಕರು
ಆಚಾರ್ಯ ಪಾಠಶಾಲಾ ಕಾಲೇಜು
ನರಸಿಂಹರಾಜ ಕಾಲೊನಿ ಬೆಂಗಳೂರು-೧೯

## ಸೂತ್ರಧಾರಿ

ವಣಿಕ ಕುಟುಂಬದಲ್ಲಿ ಜನಿಸಿದ 38 ವರ್ಷದ ಮಧ್ಯ ವಯಸ್ಕ ಹರ್ಷದ್ ಶಾಂತಿಲಾಲ್ ಮೆಹ್ತಾ ವೃತ್ತಿಪರರ ಪೈಕಿ ಅಲ್ಪಕಾಲಾವಧಿಯಲ್ಲಿ ಹಿಮಾಲಯದೆತ್ತರದ ಉನ್ನತಿ ಹೊಂದಿದ ಧೀಮಂತ. ವಾಣಿಜ್ಯ ಪದವೀದರನಾಗಿದ್ದೂ ಉದ್ಯೋಗವಿಲ್ಲದೆ ಕೆಲಕಾಲ ಮಕ್ಕಳಿಗಾಗಿ ಪುಸ್ತಕ ಭಂಡಾರವನ್ನು ನಡೆಸುತ್ತಿದ್ದರು. ಕೊನೆಗೂ ನ್ಯೂ ಇಂಡಿಯಾ ವಿಮಾ ಸಂಸ್ಥೆಯ ವಿನಿಯೋಜನ ವಿಭಾಗದಲ್ಲಿ ಗುಮಾಸ್ತರಾಗಿ ಸೇರಿದರು. ಭೋಜನ ವಿರಾಮದಲ್ಲಿ ಷೇರು ಪೇಟೆಯ ಕಲಾಪಗಳನ್ನು ಅರಿತು ಸಣ್ಣಪುಟ್ಟ ವ್ಯವಹಾರಗಳನ್ನು ಮಾಡಿ ಲಾಭ ಗಳಿಸುತ್ತಿದ್ದರು. ಇದರಿಂದ ಕ್ರಮೇಣ ಆಕರ್ಷಿತರಾಗಿ ಮೆಹ್ತಾರವರು ಕೆಲಸಕ್ಕೆ ರಾಜಿನಾಮೆ ನೀಡಿ ದಳ್ಳಾಳಿಯಾಗಿ ನೊಂದಾಯಿಸಲ್ಪಟ್ಟರು. ತಮ್ಮ ಕುಟುಂಬದಿಂದ ಒಳ್ಳೆ ಬೆಂಬಲವೂ ಸಿಗುತ್ತಿತ್ತು. ಮೆಹ್ತಾರವರ ಜೀವನದಲ್ಲಿ 80ರ ದಶಕ ಗಮನಾರ್ಹವಾದುದು. ವೃತ್ತಿಜೀವನದಲ್ಲಿ ಮೊದಮೊದಲು ಸಿಹಿಯನ್ನೇ ಸವಿದರು. ಕಾಲ್ಬಾದೇವಿ ಬಡಾವಣೆಯಲ್ಲಿ ಸಣ್ಣ ಕಛೇರಿಯೊಂದನ್ನು ಸ್ಥಾಪಿಸಿದರು. ಆದಾಯದ ಹಣವನ್ನು ಕಡಿಮೆ ಬೆಲೆಯ ಶೇರುಗಳ ಮೇಲೆ ಹೂಡುತ್ತಿದ್ದರು. ಅನಂತರ ಸಟ್ಟಾ ವ್ಯಾಪಾರಕ್ಕಿಳಿದರು. ಸ್ವಲ್ಪ ಕಹಿಯನ್ನನುಭವಿಸಿ ಸಟ್ಟಾಧಾರಿತವಾದ ವ್ಯಾಪಾರ ಚೌಕಟ್ಟನ್ನು ಬಿಟ್ಟು ದೊಡ್ಡ ಗ್ರಾಹಕ ಸಂಸ್ಥೆಯಾಧಾರಿತವಾದ ವ್ಯಾಪಾರಕ್ಕಿಳಿದರು-ಬೆಳಕು ಕಂಡರು. ಬಹುರಾಷ್ಟ್ರೀಯ ಬ್ಯಾಂಕುಗಳ ಪರಿಚಯ ಚೆನ್ನಾಗಿಯೇ ಆಯಿತು. ಹಣಪೇಟೆಗೆ ಕಾಲಿಟ್ಟರು. 50 ಕೋಟಿ ರೂಪಾಯಿಗಳ ವಹಿವಾಟುಗಳನ್ನು ಧಾರಾಳವಾಗಿ ನಿಭಾಯಿಸುತ್ತಿದ್ದರು. ಸರ್ಕಾರದ ಉದಾರೀಕರಣ ನೀತಿ ಇವರ ವ್ಯಾಪಾರಕ್ಕೆ ಒತ್ತುಕೊಟ್ಟಿತು. ಇವರು ತಂತ್ರಾಧಾರಿತವಾದ ಯೋಜನೆಯನ್ನು ಹಮ್ಮಿಕೊಂಡರು

1 ಅನೇಕ ಬ್ಯಾಂಕುಗಳು ಹಾಗೂ ದಳ್ಳಾಳಿಗಳನ್ನೊಳಗೊಂಡ ರಚನಾತ್ಮಕವಾದ ವಹಿವಾಟುಗಳು (structured deal-ings)
2 ಪ್ರತಿಸ್ಪರ್ಧಿಗಳನ್ನು ಜಯಿಸಲು ತಮ್ಮವರಾದ ಹತ್ತಾರು ದಳ್ಳಾಳಿಗಳನ್ನು ಬಿಡುವುದು.
3 ಸಾಂದರ್ಭಿಕವಾಗಿಯೂ ಅನುಕೂಲಕರವಾಗಿಯೂ ಪೇಟೆಯಿಂದ ಪೇಟೆಗೆ ಜಾರುವುದು. ಉದಾ : ಸರ್ಕಾರಿ ಪ್ರತಿಭೂತಿಗಳ ಬಡ್ಡಿದರ ಏರುವುದೆಂದು ತಿಳಿದಾಗ ಮೆಹ್ತಾರವರು ಸಲೀಸಾಗಿ ಪ್ರತಿಭೂತಿಗಳ ಪೇಟೆಗೆ ಕಾಲಿಟ್ಟರು.

ಈ ಮೇಲೆ ಹೇಳಿದ ತಂತ್ರಗಳಿಂದ ವ್ಯಾಪಾರದಲ್ಲಿ ಯಶಸ್ಸು ಕಂಡರು. ಪೇಟೆಯಲ್ಲಿ ಇವರ ಸ್ಥಾನಮಾನಗಳು ಏರಿದುವು. ದೈನಂದಿನ ವ್ಯಾಪಾರದ ಗಾತ್ರಹತ್ತುಪಟ್ಟು ಹೆಚ್ಚಾಯಿತು. ಸಮಗ್ರಭಾರತದ ದಿನವಹಿ ಪ್ರತಿಭೂತಿಗಳ ಒಟ್ಟು ವ್ಯಾಪಾರದಲ್ಲಿ ಮೆಹ್ತಾ ಮತ್ತು ಸಂಗಡಿಗರ ಪಾಲು ಶೇ 50ರಷ್ಟು. ಕಾಲ್ಬಾದೇವಿಯಲ್ಲಿದ್ದ ಕಛೇರಿಯನ್ನು ನಾರಿಮನ್ ಸಂಕೀರ್ಣಕ್ಕೆ ವರ್ಗಾಯಿಸಲಾಯಿತು.ಗ್ರೋಮೋರ್ ಸಂಶೋಧನಾ ಹಾಗೂ ಆಸ್ತಿನಿರ್ವಹಣಸಂಸ್ಥೆಯೂ ಉಗಮವಾಯಿತು. ನಿವೃತ್ತ ಬ್ಯಾಂಕ್ ಅಧಿಕಾರಿಗಳಿಗೆ ಕಾನೂನುಬದ್ಧ ಹಾಗೂ ಬಾಹಿರವಾದ ಕಲಾಪಗಳು ಚೆನ್ನಾಗಿ ತಿಳಿದಿರುತ್ತೆ. ನಿಯಮಬಾಹಿರವಾದ ಕಾರ್ಯಗಳನ್ನು ಸಾಧಿಸಲು ಇವರಲ್ಲಿರುವ ಚಾಣಾಕ್ಷತೆಯನ್ನು ಸಂದರ್ಭಾನುಸಾರವಾಗಿ ಉಪಯೋಗಿಸಿಕೊಳ್ಳುವ ಉದ್ದೇಶದಿಂದ ರಿಸರ್ವ್ ಬ್ಯಾಂಕಿನ ಪೂರ್ವಾನುಮತಿ ಇಲ್ಲದೆ ಲಕ್ಷಾಂತರ ರೂಪಾಯಿಗಳ ಸಂಬಳದ ಮೇಲೆ ಅವರನ್ನು ನೇಮಕ ಮಾಡಲಾಯಿತು. ಇವರುಗಳ ಜೊತೆಗೆ ಭಾರಿ ಸಂಬಳದ ಮೇಲೆ 35 ಎಂಬಿಎಗಳು ಮೆಹ್ತಾರ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿದ್ದರು.

12 ವರ್ಷಗಳ ಅವಧಿಯಲ್ಲಿ ಮೆಹ್ತಾರವರು ಪೇಟೆಯಲ್ಲಿ ನಾಯಕ ಸ್ಥಾನವನ್ನು ಗಳಿಸಿದರು. ನಿದ್ರಿಸುತ್ತಿದ್ದ ಪೇಟೆಯನ್ನು ಹೊಡೆದೆಬ್ಬಿಸಿದರು. ಅತ್ಯಂತ ಬಿರುಸಿನ ತೇಜಿವಾಲ (ಮಹಾಗೂಳಿ), ಬೊಂಬಾಯಿ ಸ್ಟಾಕ್ ಎಕ್ಸ್‌ಛೇಂಜ್‌ನ ಅಮಿತಾಬ್ ಬಚ್ಚನ್, ಷೇರುಪೇಟೆಯ ಕಿಂದರಿಜೋಗಿ, ಮಹಾ ಮಾಂತ್ರಿಕ ಎಂದೆಲ್ಲಾ ಖ್ಯಾತಿ ಹೊಂದಿದರು. ಅವರು ಇದ್ದಲ್ಲಿ ಹೋದಲ್ಲಿ ಚಿತ್ರಕಾರರು, ಆಟೋಗ್ರಾಫ್ ಸಹಿ ಕೇಳುವವರು ಸುತ್ತುವರಿಯುತ್ತಿದ್ದರು. ಸ್ವಂತ ಆಸ್ತಿಯ ಮೌಲ್ಯ ರೂ. 100 ಕೋಟಿ ದಾಟಿತು. 10,000 ಚದರಡಿ ವಿಸ್ತೀರ್ಣವುಳ್ಳ ತೋಟ, ಸಭಾಂಗಣ, ಬಿಲಿಯರ್ಡ್ಸ್ ಕೋಣೆ, ಈಜುವಕೊಳವನ್ನೊಳಗೊಂಡ 'ಮಾಧುಲಿ' ಎಂಬ ಬಂಗಲೆ, 30 ವಿದೇಶಿ ಕಾರುಗಳು ಇನ್ನೂ ಎಲ್ಲಾ ಈ ಆಸ್ತಿಯಲ್ಲಿ ಸೇರಿದೆ. ಬಂಧು ಮಿತ್ರರ ಸಲಹೆ ಮೇರೆಗೆ ನಾರಿಮನ್ ಸಂಕೀರ್ಣವನ್ನು ಕೊಳ್ಳುವ ನಿರ್ಧಾರವನ್ನು ಕೈಬಿಟ್ಟರು. ಇವರ ಉನ್ನತಿಯನ್ನು ಕಂಡು ಹೊಟ್ಟೆಕಿಚ್ಚುಪಟ್ಟವರೂ ಅನೇಕರಿದ್ದರು.

ಷೇರುಗಳ ಆಸ್ತಿ ರೂ. 1,500 ಕೋಟಿಯನ್ನು ಮೀರಿತು. ಎಲ್ಲಾ ವ್ಯವಹಾರಗಳೂ ಕೋಟಿ ರೂ.ಗಳ ಸಂಖ್ಯೆಯಲ್ಲೇ! ಪ್ರತಿ ಬ್ಯಾಂಕಿನ ಅಧ್ಯಕ್ಷರೂ ಮೆಹ್ತಾರವರ ಮೈತ್ರಿಯನ್ನು ಬಯಸುತ್ತಿದ್ದರು. "ರೂಪಾಯಿಯ ಪರಿವರ್ತನೆಗೆ ಅವಕಾಶವಿದ್ದಿದ್ದರೆ ಕೋಟ್ಯಂತರ ಡಾಲರುಗಳನ್ನು ತಂದುಕೊಡುತ್ತಿದ್ದೆ" ಎಂದು ಜಂಭ ಕೊಚ್ಚಿಕೊಳ್ಳುತ್ತಿದ್ದರು. ಬ್ಯಾಂಕುಗಳು ನೀಡಿದ ಸಾಲದಿಂದ ಷೇರುಗಳ ಮೇಲೆ ಹೂಡುವ ನಿರ್ಬಂಧವನ್ನು ಕಿತ್ತೊಗೆಯಲು ಮೆಹ್ತಾರವರು ಎದುರುನೋಡುತ್ತಿದ್ದರು. ತಮ್ಮ ಹುಟ್ಟುಹಬ್ಬದ ಉಡುಗೊರೆಯಾಗಿ ರೂ. 1ಕೋಟಿ ಮೌಲ್ಯದ ಎ. ಸಿ. ಸಿ. ಷೇರುಗಳನ್ನು ಕೊಂಡರು. ಬಂಡವಾಳ ಪೇಟೆಯಲ್ಲಿ ಭಾರಿ ಪ್ರಮಾಣದ ಸಾಲಗಳನ್ನು ಎತ್ತುತ್ತಿದ್ದರು. ಅವುಗಳಲ್ಲಿ ಶೇ. 50ರಷ್ಟು ಚುಕ್ತ ಮಾಡುವ ಸಾಮರ್ಥ್ಯವನ್ನೂ ಹೊಂದಿದ್ದರು. ಕುಸಿಯುತ್ತಿರುವ ಮಾಜ್ದಾ ಸಂಸ್ಥೆಯನ್ನು ಖರೀದಿಸಿದರು. ಅದರ ಷೇರಿನ ಬೆಲೆ 5 ರೂಪಾಯಿಯಿಂದ ರೂ. 240ಕ್ಕೇರಿತು. ಅಪೋಲೊ ಟೈರ್ಸ್, ರಿಲೈಯನ್ಸ್, ಟಾಟಾ ಉಕ್ಕು, ಕರ್ಣಾಟಕ ಬಾಲ್ ಬೇರಿಂಗ್ಸ್, ಗುಜರಾತ್ ಅಂಬುಜಾ ಸಂಸ್ಥೆಗಳ ಷೇರುಗಳ ಬೆಲೆ ಗಗನಕ್ಕೇರಿದುವು. ಬೊಂಬಾಯಿ ಷೇರು ಪೇಟೆಯ ಚರಿತ್ರೆಯಲ್ಲೇ ಎ.ಸಿ.ಸಿ ಷೇರುಗಳ ಬೆಲೆ ಏರಿಕೆಯ ಮೇಲೆ ಏರಿಕೆ ಇನ್ನೊಂದಿಲ್ಲ. 500 ರೂ.ಗಳಿಂದ ರೂ. 4,000 ವರೆಗೆ, ಮತ್ತೆ ಮುಂದುವರಿದು 10,000 ರೂ.ಗಳಿಗೆ ಜಿಗಿಯಿತು. ಈ ಸಂತೋಷದ ಸಾಂಕೇತಿಕವಾಗಿ 10,000 ರೂ.ಗಳ ಪಟಾಕಿ ಬಾಣ ಬಿರುಸುಗಳನ್ನು ಉಡಾಯಿಸಲಾಯಿತು. ಮೆಹ್ತಾರವರ ಹಸ್ತಸ್ಪರ್ಶವಾದ ಷೇರು ಅದೆಷ್ಟೇ ಕಳಪೆಯಾಗಿರಲಿ ಚಿನ್ನವಾಗುತ್ತಿತ್ತು.

ಯಾವುದೇ ಸಂಸ್ಥೆ ಮೆಹ್ತಾರೊಡನೆ ಚರ್ಚಿಸುತ್ತಿದ್ದರೆ ಆ ಸಂಸ್ಥೆಯ ಷೇರಿನ ಬೆಲೆ ಗಗನಕ್ಕೇರುವುದರಲ್ಲಿ ಸಂದೇಹವೇ ಇರಲಿಲ್ಲ. ಷೇರುಗಳ ಪೂರೈಕೆಗಿಂತ ಬೇಡಿಕೆ ಹತ್ತುಪಾಲು ಹೆಚ್ಚಿತು. ಹೂಡಿಕೆದಾರರು ಪೇಟೆಯಲ್ಲಿ ಸಿಗುವ ಯಾವುದೇ ಷೇರಾಗಲಿ ಕೊಳ್ಳಲು ಹಿಂಜರಿಯುತ್ತಿರಲಿಲ್ಲ. ಉನ್ನತಿಯ ಪಥದಲ್ಲಿ ಶೀಘ್ರವಾಗಿ ಓಡುತ್ತಿದ್ದ ಮೆಹ್ತಾರವರು ಗ್ರೋಮೋರ್ ಎಂಬ ಹೆಸರಿನಲ್ಲಿ ಇನ್ನು ಮೂರು ಸಂಸ್ಥೆಗಳನ್ನು ಸ್ಥಾಪಿಸಿದರು. ಬ್ಯಾಂಕಿಂಗ್ ಹಾಗೂ ಷೇರುಪೇಟೆ ಪದ್ಧತಿಯಲ್ಲಿರುವ ಕಂಡೂ ಕಾಣದ ನ್ಯೂನತೆಗಳನ್ನು ಅತಿಯಾಗಿ ಉಪಯೋಗಿಸಿಕೊಳ್ಳುವ ಮೆಹ್ತಾರವರ ಈ ಕೆಳಕಂಡ ಚಾಣಾಕ್ಷ ತಂತ್ರಗಳು ಮೆಚ್ಚುವಂಥದ್ದು :

(a) ಅಂತರಪಣನ ವ್ಯವಹಾರಗಳಲ್ಲಿ (**arbitrage business**) ಅತ್ಯಂತ ಕಡಿಮೆ ಹೂಡಿಕೆ ಅಥವಾ ಹೂಡಿಕೆ ಇಲ್ಲದೆಯೇ ಲಾಭ ಗಳಿಸುವುದು—ಕೊಳ್ಳುವ ಹಾಗೂ ಮಾರುವ ಸಮಯಾಂತರವನ್ನು ಸದುಪಯೋಗಪಡಿಸಿಕೊಳ್ಳುವುದು.

(b) ಹಣ ಪಾವತಿ ಮಾಡುವ ಹಾಗೂ ಪ್ರತಿಭೂತಿಗಳನ್ನು ತಲುಪಿಸುವ ಕಾರ್ಯಗಳ ನಡುವೆ ಇರುವ ಸಮಯಾಂತರವನ್ನು ವಿಸ್ತರಿಸಿ ಜೋಡಿ ಅಥವಾ ದ್ವಿಮುಖಿ 'ವ್ಯವಹಾರಗಳಿಗೆ ಇಳಿವುದು ಮತ್ತು ಸಮನ್ವಯ ವ್ಯವಸ್ಥೆಯಲ್ಲಾಗುವ ವಿಳಂಬವನ್ನು ಸದುಪಯೋಗಪಡಿಸಿಕೊಳ್ಳುವುದು.

ಅವ್ಯವಹಾರದ ಪ್ರಕರಣಗಳನ್ನು ಮತ್ತು ಅವುಗಳಿಗೆ ಕಾರಣಗಳನ್ನು ಅರಿಯುವ ಮುನ್ನ, ಅವುಗಳಲ್ಲಿ ಕಂಡುಬರುವ ಅಥವಾ ಉಪಯೋಗಿಸಿರುವ ಶಬ್ದಗಳಿಗೆ ಅರ್ಥವನ್ನು ತಿಳಿಯುವುದು ಅವಶ್ಯ.

**1 ಸರ್ಕಾರಿ ಪ್ರತಿಭೂತಿಗಳು :**

ಲಾಭಾಂಶ ಕಡಿಮೆಯಾದರೂ ಇವು ಕ್ಷೇಮವಾದ್ದು. ದಳ್ಳಾಳಿಗಳ ಮೂಲಕ ಇವುಗಳ ಆಧಾರದ ಮೇಲೆ ಸಾಲ ಕೊಟ್ಟು-ತಂದು ವಾಣಿಜ್ಯ ಬ್ಯಾಂಕುಗಳು ದ್ರವತ್ವ ನಿಯಮವನ್ನು ಪಾಲಿಸುವುದು ಮಾಮೂಲಾದ ಕಾರ್ಯವಾಗಿತ್ತು. ಹಣಪಾವತಿ ಮಾಡಿದ್ದಕ್ಕೂ ಪ್ರತಿಭೂತಿಗಳನ್ನು ತಲುಪಿಸುವುದಕ್ಕೂ ಸಮಯಾಂತರವಿರುವುದು. ಅಸಂಖ್ಯಾತ ವಹಿವಾಟುಗಳಲ್ಲಿ ಭೌತಿಕವಾಗಿ ಪ್ರತಿಭೂತಿಗಳನ್ನು ತಲುಪಿಸುವುದು ಕಷ್ಟವಾದ ಕೆಲಸ. ಇದನ್ನು ಬಗೆಹರಿಸುವುದಕ್ಕಾಗಿ 'ಬ್ಯಾಂಕರ್ ರಸೀತಿ'ಗಳನ್ನು ನೀಡುವರು.

**2 ಬ್ಯಾಂಕರ್ ರಸೀತಿ :**

"ಬಿಕರಿಯಾದ ಪ್ರತಿಭೂತಿಗಳಿಗೆ ಹಣ ಪಾವತಿಯಾಗಿರುತ್ತೆ."

"ಬಿಕರಿಯಾದ ಪ್ರತಿಭೂತಿಗಳು ಮಾರುವವನ ಹತ್ತಿರವೇ ಇರುತ್ತವೆ"

"ಬಿಕರಿಯಾದ ಪ್ರತಿಭೂತಿಗಳನ್ನು ಸ್ವಲ್ಪಕಾಲ ನಂತರ ಕೊಳ್ಳುವವನಿಗೆ ತಲುಪಿಸಲಾಗುವುದು"

ಎಂಬ ಈ ಮೂರು ಹೇಳಿಕೆಗಳು ಪ್ರತಿಯೊಂದು ಬ್ಯಾಂಕರರ ರಸೀತಿಯಲ್ಲಿರುತ್ತದೆ. ಪ್ರತಿ ರಸೀತಿಯ ಅವಧಿ 90 ದಿನಗಳು ಮಾತ್ರ. ಇವು ಪರಕ್ರಾಮ್ಯವಲ್ಲದಿದ್ದರೂ ಎರಡು ಗೊಂಚಲು ರಸೀತಿಗಳನ್ನು ಪರಸ್ಪರವಾಗಿ ವಿನಿಮಯಿಸುವುದು ರೂಢಿಯಲ್ಲಿರುತ್ತೆ. ಈ ರಸೀತಿ ವ್ಯವಹಾರಗಳು ಎರಡು ಬ್ಯಾಂಕುಗಳ ನಡುವೆ ಮಾತ್ರ ಜರುಗಬೇಕು. ದಳ್ಳಾಳಿಗಳು ಕಮಿಷನ್‌ಗೆ ಮಾತ್ರ ಅರ್ಹರು. ಪ್ರತಿ ರಸೀತಿಯಲ್ಲಿ ಇಬ್ಬರು ಅಧಿಕಾರಿಗಳ ಸಹಿ ಹಾಗೂ ಪ್ರತಿಭೂತಿಗಳ ಆಧಾರವಿರಬೇಕು.

**3 ಪ್ರತಿಭೂತಿಗಳ ಸರ್ವಸಾಮಾನ್ಯ ಖಾತೆ ಪುಸ್ತಕ (Security General Ledger : SGL)**

ಪ್ರತಿಭೂತಿಗಳನ್ನು ಭೌತಿಕವಾಗಿ ತಲುಪಿಸುವ ಕ್ರಮವನ್ನು ತಗ್ಗಿಸಲು ಎಸ್‌ಜಿಎಲ್ ವ್ಯವಸ್ಥೆ ಜಾರಿಗೆ ಬಂತು. ವಹಿವಾಟಿನ ಗಾತ್ರ ಹೆಚ್ಚಾದಂತೆಲ್ಲ ಅವುಗಳನ್ನು ತಲುಪಿಸುವುದು ಅಸಾಧ್ಯವಾಗುವುದು. ಮಾರುವ ಬ್ಯಾಂಕು ಕೊಳ್ಳುವ ಬ್ಯಾಂಕಿಗೆ ಎಸ್‌ಜಿಎಲ್ ಚೀಟಿಯನ್ನು ನೀಡುತ್ತದೆ. ಕೊಳ್ಳುವ ಬ್ಯಾಂಕು ಈ ಚೀಟಿಯನ್ನು ಸಾರ್ವಜನಿಕ ಋಣ ಕಛೇರಿಯಲ್ಲಿ ದಾಖಲು ಮಾಡುವುದು. ನಂತರ ತಾಳೆ ಕೆಲಸ ನಡೆಯುವುದು ಆದರೆ ತಾಳೆ ವ್ಯವಸ್ಥೆ ನಿಧಾನವಾಗಿ ಜರುಗುವುದು.

**4 ಮರುಕೊಳ್ಳುವಿಕೆಗಾಗಿ ಶೀಘ್ರ ಮಾರಾಟ (Short selling)**

**5 ಒಪ್ಪಿದ ವಾಯಿದಾ ವಹಿವಾಟುಗಳು (Ready Forword Transaction-RFT)** ಮಾರಾಟದ ಸಮಯದಲ್ಲೇ ಮರುಕೊಳ್ಳುವ ಬೆಲೆಯನ್ನು ನಿಗದಿಪಡಿಸಿರುತ್ತೆ. ಇದೇ ರೀತಿಯಲ್ಲಿ ಮಾರಾಟದ ಬೆಲೆಯನ್ನು ನಿಗದಿಪಡಿಸಿರುತ್ತೆ. ಈ ಎರಡೂ ಬೆಲೆಗಳ ವ್ಯತ್ಯಾಸವೇ ದಳ್ಳಾಳಿಗಳ ಲಾಭ.

**6 ಜೋಡಿ ಅಥವಾ ದ್ವಿಮುಖಿ ವಹಿವಾಟುಗಳು (Double Deals)**

ಇಲ್ಲಿ ಎರಡೂ ಬ್ಯಾಂಕುಗಳು ಕಡಿಮೆ ದರದ ಪ್ರತಿಭೂತಿಗಳನ್ನು ಅಧಿಕ ಬಡ್ಡಿದರದ ಪ್ರತಿಭೂತಿಗಳಿಗೆ ಬದಲಿಸಿ ಮೂರನೆ ವ್ಯಕ್ತಿಗೆ ವರ್ಗಾಯಿಸುವುವು. ಲಾಭವನ್ನೋ ಅಥವಾ ಕಾಲಾವಧಿಯನ್ನೋ ಹೆಚ್ಚಿಸುವುದೇ ಈ ವಹಿವಾಟುಗಳ ಉದ್ದೇಶ.

## ವಂಚನೆಯ ಜಾಲ: ಹಿನ್ನೆಲೆ–ಉಗಮ–ವಿಧಾನ

1991ರ ಮಾರ್ಚ್ ತಿಂಗಳಿನಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್ ಸರ್ಕಾರಿ ಪ್ರತಿಭೂತಿಗಳ ಬಡ್ಡಿದರವನ್ನು 12%ರಿಂದ 12.5%ಕ್ಕೆ ಏರಿಸಿತು. ಹರ್ಷದ್ ಮೆಹ್ತಾ ಮತ್ತು ಸಂಗಡಿಗರು ಜೋಡಿ ವ್ಯವಹಾರಕ್ಕಿಳಿಯಲು ದಾಪುಗಾಲು ಹಾಕಿದರು. ವ್ಯವಹಾರಗಳನ್ನು ಬ್ಯಾಂಕುಗಳ ಮೂಲಕ ಮಾಡಿಸಿ, ಕೊಳ್ಳುವ ಹಾಗೂ ಮಾರುವವನ ಹೆಸರನ್ನು ಗುಪ್ತವಾಗಿಟ್ಟು ಭಾರಿ ಪ್ರಮಾಣದಲ್ಲಿ ಬ್ಯಾಂಕರ್ ರಸೀತಿಗಳನ್ನು ಎಸ್. ಜಿ. ಎಲ್ ನಮೂನೆಗಳಿಗೆ ಬದಲಾಗಿ ನೀಡಿದರು. ಬ್ಯಾಂಕರ್ ರಸೀತಿಗಳ ಆಧಾರದ ಮೇಲೆ ಬೃಹತ್ ಸಾಲಗಳನ್ನು ಎತ್ತಿ ಷೇರುಗಳ ಮೇಲೆ ಹೂಡಿದರು. ಬ್ಯಾಂಕುಗಳಿಗೂ ದಳ್ಳಾಳಿಗಳಿಗೂ ವಿಶ್ವಸನೀಯ ಹಾಗೂ ನಿಕಟ ಸಂಬಂಧ ಬೆಳೆಯಿತು. ಕೋಟ್ಯಂತರ ರೂಪಾಯಿ ಪೇಟೆಯಿಂದ ಪೇಟೆಗೆ ರವಾನೆಯಾಗತೊಡಗಿತು. ಹಣ ಒದಗಿಸಲು ಅನೌಪಚಾರಿಕವಾದ ವ್ಯವಸ್ಥೆ ಎಲ್ಲೆಡೆ ವ್ಯಾಪಿಸಿತು. ವಹಿವಾಟಿನ ಗಾತ್ರ ಹೆಚ್ಚಿದಂತೆಲ್ಲಾ ದಳ್ಳಾಳಿಗಳ ಸಂಖ್ಯೆಯೂ ಸ್ಪರ್ಧೆಯೂ ಹೆಚ್ಚಿದುವು. ಬ್ಯಾಂಕುಗಳೇ ದಳ್ಳಾಳಿಗಳಾಗಿವರ್ತಿಸತೊಡಗಿದುವು. ಬ್ಯಾಂಕ್ ಕಲಾಪಗಳು ದ್ರವತ್ವ ನಿಯಮವನ್ನು ಮೀರುವ ಪರಿಸ್ಥಿತಿ ಒದಗಿತು.

ತಮ್ಮ ವಿವಿಧ ಪರಿಯೋಜನೆಗಳಿಗೆ ಹಣ ಒದಗಿಸಲು ಹರ್ಷದ್ ಮೆಹ್ತಾ 1,500 ಕೋಟಿ ಮೌಲ್ಯದ ಷೇರು ವ್ಯಾಪಾರಕ್ಕಿಳಿದಾಗ ತೆರಿಗೆ ಅಧಿಕಾರಿಗಳಿಗೆ ಸಂಶಯ ಬಂದು ಮೆಹ್ತಾರ ಮನೆ-ಮಠಾರಗಳನ್ನು ಧಾಳಿಮಾಡಿದರು. ಮೆಹ್ತಾರವರು 26 ಕೋಟಿ ಮುಂಗಡ ತೆರಿಗೆಯನ್ನು ಪಾವತಿಮಾಡಿ ದಾಖಲೆಯನ್ನು ಸ್ಥಾಪಿಸಿದರು. ಜಾಹಿರಾತು-ಪ್ರಚಾರಗಳನ್ನು ದೂರೀಕರಿಸಿದರು. ಇಷ್ಟೊಂದು ಹಣ ಎಲ್ಲಿಂದ ಬಂತು ಎಂದು ದಳ್ಳಾಳಿ ಸಮುದಾಯ ಹುಬ್ಬೇರಿಸಿತು. ಬಹುರಾಷ್ಟ್ರೀಯ ಸಂಸ್ಥೆಯಿಂದಲೋ ತೈಲರಾಷ್ಟ್ರಗಳಿಂದಲೋ ಇರಬೇಕು ಎಂದು ಸುಮ್ಮನಾಯಿತು. ಆದರೆ ಸಂಶಯ ಸುಳ್ಳಾಗಿ ಅದು ಷೇರುಪೇಟೆಯ ಚೌಕಟ್ಟಿನಲ್ಲೇ ಸೃಷ್ಟಿಯಾಗಿದೆ ಎಂದೂ ತಿಳಿಯಿತು. ಎಲ್ಲರೂ ವಿಸ್ಮಯಪಟ್ಟರು.

ಪೇಟೆಯಿಂದ ಪೇಟೆಗೆ ಹಣದ ಮಹಾಪೂರವೇ ಹರಿಯತೊಡಗಿತು. ಮೆಹ್ತಾರವರು ಪ್ರತಿಭೂತಿಗಳ ವಿಳಂಬ ತಂತ್ರದಿಂದ ತಮಗೆ ತಾವೇ ಉದರಿ ಸೌಲಭ್ಯವನ್ನು ಸೃಷ್ಟಿಸಿಕೊಳ್ಳುತ್ತಿದ್ದರು. ಋಣ ತೀರಿಸುವ ಅವರ ಚಾಣಾಕ್ಷತೆ ಸೋಜಿಗದ ವಿಷಯವಾಗಿತ್ತು. ಸರ್ಕಾರಿ ಪ್ರತಿಭೂತಿ ಪೇಟೆಯಲ್ಲಿ ಆಯ್ದ ದಳ್ಳಾಳಿಗಳಿಗೆ ಮಾತ್ರ ಪ್ರವೇಶಾವಕಾಶವಿತ್ತು. ರಿಸರ್ವ್ ಬ್ಯಾಂಕಿನ ಅಧಿಕೃತ ದಳ್ಳಾಳಿಗಳ ಪಟ್ಟಿಯಲ್ಲಿ ಮೆಹ್ತಾರ ಹೆಸರಿಲ್ಲ.

ಜುಲೈ 91ರಿಂದ ಏಪ್ರಿಲ್ 92ರವರೆಗೆ ದಳ್ಳಾಳಿಗಳ ಮೂಲಕ ಜರುಗಿದ ಭಾರತೀಯ ಸ್ಟೇಟ್ ಬ್ಯಾಂಕಿನ ಹೂಡಿಕೆ ವ್ಯವಹಾರದ ಒಟ್ಟು ಮೊತ್ತ 41,252 ಕೋಟಿ ರೂಪಾಯಿಗಳು. ಇದರಲ್ಲಿ ಮೆಹ್ತಾರದು 17,000 ಕೋಟಿ ರೂಪಾಯಿಗಳು. ಇವರು ಅಳವಡಿಸಿದ ವಿಧಾನ : ಭಾರಿ ಪ್ರಮಾಣದಲ್ಲಿ ಪ್ರತಿಭೂತಿಗಳನ್ನು ಖರೀದಿಸಿ ಅವುಗಳ ಬೆಲೆಯನ್ನು ಗಗನಕ್ಕೇರಿಸಿ, ಆ ಹೆಚ್ಚಿದ ಷೇರುಗಳನ್ನು ಸಾಲ

ಎತ್ತಲು ಜೊತೆಯಾಧಾರವಾಗಿ ಉಪಯೋಗಿಸು ವುದು. ಬಂದ ಹಣದಲ್ಲಿ ಪ್ರತಿಭೂತಿಗಳನ್ನು ಅಥವಾ ಯೂನಿಟ್‌ಗಳನ್ನು ತಮ್ಮ ಕೈಸೇರದೆಯೇ ಕೊಂಡಂತೆ ಮಾಡುವುದು—ಪುನಃ ಹೀಗೇ ಮುಂದು ವರಿಸುವುದು. ಈ ಪ್ರಸಂಗಗಳನ್ನು ಗಮನಿಸಿದ ಭಾರತೀಯ ರಿಸರ್ವ್ ಬ್ಯಾಂಕಿನ ಉಪ ಗೌರ್ನರ್ ಆಗಿಂದಾಗ್ಗೆ ಎಚ್ಚರಿಕೆ ಸುತ್ತೋಲೆಯನ್ನು ಕಳುಹಿಸಿ ದ್ದರೂ ಯಾವ ಬ್ಯಾಂಕೂ ವರದಿ ಮಾಡಲಿಲ್ಲ. ಬ್ಯಾಂಕ್‌ಗಳ ಉನ್ನತ ಅಧಿಕಾರಿಗಳಿಗೆ ಕೈ ಬೆಚ್ಚಗೆ ಮಾಡುವುದಕ್ಕೋಸ್ಕರವೇ ಕೆಲವು ದಳ್ಳಾಳಿಗಳನ್ನು ಛೂಬಿಡಲಾಗಿತ್ತು. ಭಾರತೀಯ ಸ್ಟೇಟ್ ಬ್ಯಾಂಕ್ ಖಾತೆಯಲ್ಲಿ 622 ಕೋಟಿ ರೂಪಾಯಿಗಳ ಆಸ್ತಿ ಕೊರತೆ ಇದ್ದುದ್ದನ್ನು ರಿಸರ್ವ್ ಬ್ಯಾಂಕಿನ ನಿರೀಕ್ಷಣಾಪಡೆ ತಾಳೆಮಾಡುವಾಗ ಪತ್ತೆಹಚ್ಚಿ ಮೋಸದ ಮುಚ್ಚಳವನ್ನು ತೆಗೆಯಿತು. ರಿಸರ್ವ್ ಬ್ಯಾಂಕ್ ಸಂಶಯಪಟ್ಟಿದ್ದು ನಿಜವಾಯಿತು. ಸಾರ್ವಜನಿಕ ಋಣ ಕಛೇರಿಯಲ್ಲಿದ್ದ ಎಸ್.ಜಿ.ಎಲ್. ನಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿಗೆ ಸಂಬಂಧಿಸಿದಂತೆ 622 ಕೋಟಿ ರೂಪಾಯಿಗಳ ಕೊರತೆ ಕಂಡು ಬಂತು. ಆದರೆ ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಎಸ್.ಜಿ.ಎಲ್. ಖಾತೆಯಲ್ಲಿ 622 ಕೋಟಿ ರೂಪಾಯಿಗಳ ನಮೂದು ತೋರಿಸುತ್ತಿತ್ತು. ಸಾರ್ವಜನಿಕ ಋಣಕಛೇರಿಯಲ್ಲಿದ್ದ ಖಾತೆ ಪುಸ್ತಕ ವನ್ನು ಮೆಹ್ತಾರ ಸ್ವಂತ ವಿನಿಯೋಜನೆ ಖಾತೆಯಂತೆ ನೋಡಲಾಗುತ್ತಿತ್ತು. ಎಲ್ಲಾ ಭೂಮಂತ್ರಂ ಗಾಳಿ ಯಂತೆ ಮೆಹ್ತರವರು ಮಧ್ಯದಲ್ಲಿದ್ದು ಸುತ್ತಲೂ ಬ್ಯಾಂಕುಗಳು ತಮ್ಮಲ್ಲಿರದ ಪ್ರತಿಭೂತಿಗಳನ್ನು ಮಾರುತ್ತಿದ್ದುವು. ಇನ್ನಷ್ಟು ಬ್ಯಾಂಕುಗಳು ತಾವು ಕೊಳ್ಳದ ಪ್ರತಿಭೂತಿಗಳಿಗೆ ಹಣಪಾವತಿ ಮಾಡು ತ್ತಿದ್ದುವು. ಎಸ್.ಜಿ.ಎಲ್. ನಮೂನೆಗಳನ್ನು ದಳ್ಳಾಳಿಗಳೂ, ಬಿ. ಆರ್.ಗಳನ್ನು ಬ್ಯಾಂಕುಗಳೂ ಯಥೇಚ್ಛವಾಗಿ ಉಪಯೋಗಿಸುತ್ತಿದ್ದುವು. ಆದರೆ ಇವೆಲ್ಲಾ ದೋಷಪೂರಿತವಾದುವು. ಇವುಗಳ ಆಧಾರದ ಮೇಲೆ 500 ಕೋಟಿ ರೂಪಾಯಿಗಳ ಮೊತ್ತದ ಭಾರಿ ಚೆಕ್ಕು ನೀಡಲಾಯಿತು. 'ಅತ್ಯಂತ ಭಾರಿ ವೈಯಕ್ತಿಕ ಚೆಕ್ಕು' ಎಂದು ದಾಖಲಾಯಿತು. ದ್ರವತ್ವನಿಯಮದ ಬಗ್ಗೆ ಯಾರಿಗೂ ಲಕ್ಷ್ಯವಿಲ್ಲ. ಪ್ರತಿಭೂತಿಗಳನ್ನೇಕೆ ತಲುಪಿಸಲಿಲ್ಲ ಎಂಬ ಪ್ರಶ್ನೆಗೆ "ಧಾಳಿ ಸಮಯದಲ್ಲಿ ತೆರಿಗೆ ಅಧಿಕಾರಿಗಳು ಅವು ಗಳನ್ನು ವಶಪಡಿಸಿಕೊಂಡರು" ಎಂದು ಮೆಹ್ತಾ ರವರು ಹೇಳಿಕೆಯನ್ನು ಕೊಟ್ಟರು. ಅವರ ಚಾಲ್ತಿ ಖಾತೆ ಸಂಶಯವನ್ನುಂಟುಮಾಡಿತು. 91 ಏಪ್ರಿಲ್-ಮೇನಲ್ಲಿ 27 ಲಕ್ಷ ರೂಪಾಯಿಗಳು, ಜೂನ್‌ನಲ್ಲಿ 1 ಕೋಟಿ ರೂ.ಗಳ ಧನಿಕೆ ನಮೂದನ್ನೂ ಏಪ್ರಿಲ್ 92ರಲ್ಲಿ 1239.39 ಕೋಟಿಋಣಿಕೆ ನಮೂದನ್ನೂ 1239.76ರೂ. ಧನಿಕೆ ನಮೂದನ್ನೂ ಖಾತೆ ತೋರಿಸುತ್ತಿತ್ತು. ಪ್ರಾಪ್ತಿಕರ್ತನ ಖಾತೆ ಚೆಕ್ಕು ಗಳನ್ನು ಭಾರತೀಯ ಸ್ಟೇಟ್ ಬ್ಯಾಂಕ್ ಮೆಹ್ತಾ ರವರು ಹೇಳಿದಂತೆ ನೀಡುತ್ತಿತ್ತು. ಭಾರತೀಯ ಸ್ಟೇಟ್ ಬ್ಯಾಂಕಿನ ಸೀತಾರಾಮ್ ಎಂಬುವರು ಎಸ್.ಜಿ.ಎಲ್. ನಮೂನೆಗಳನ್ನೂ ಬ್ಯಾಂಕರ್ ಚೆಕ್ಕುಗಳನ್ನೂ ತಾವೇ ಸಹಿಮಾಡಿ ಅನುಕೂಲಕ್ಕೆ ತಕ್ಕಂತೆ ತಾರೀಖುಗಳನ್ನು ಹಾಕಿ ಹಿರಿಯ ಅಧಿಕಾರಿಗಳಿಗೆ ತಿಳಿಯದಂತೆ ಚಲಾಯಿಸಿದ್ದಾರೆ. ಒಂದು ಗೊಂಚಲು ಬ್ಯಾಂಕರ್ ರಸೀತಿಗಳ ವಿರುದ್ಧ ಇನ್ನೊಂದು ಗೊಂಚಲು ಬಿ.ಆರ್.ಗಳನ್ನು ನೀಡಿದಾಗ ಪ್ರತಿಭೂತಿ ಅಥವಾ ಯೂನಿಟ್‌ಗಳ ಆಧಾರವಿಲ್ಲದ ಬಿ.ಆರ್.ಗಳು ಮೋಸದ ರಸೀತಿಗಳಾ ದುವು. ಪ್ರಾಪ್ತಿಕರ್ತನ ಖಾತೆ (A/c Payee) ಬ್ಯಾಂಕರ್ ಚೆಕ್ಕುಗಳನ್ನು ಮೆಹ್ತಾರ ಖಾತೆಗೆ ಹಾಕಿ ದಾಗ ಕಾರ್ಯವಿಧಾನವನ್ನೇ ಬಗ್ಗಿಸಿಕೊಂಡಿದ್ದುದು ಗೋಚರವಾಯಿತು. ರಿಸರ್ವ್ ಬ್ಯಾಂಕಿನ ಎಚ್ಚರಿಕೆ ಹಾಗೂ ಮಾರ್ಗ ಸೂತ್ರಗಳನ್ನುಅಲಕ್ಷ್ಯಮಾಡಿದ್ದೂ ಗೋಚರವಾಯಿತು.

ಈ ಹಗರಣ ಭಾರತೀಯ ಸ್ಟೇಟ್ ಬ್ಯಾಂಕಿನ ನಿರ್ದೇಶಕ ಮಂಡಲಿಯಲ್ಲಿ ವಾಗ್ಯುದ್ಧವನ್ನೇ ತಂದೊಡ್ಡಿತು. ಒಂದು ಮೂಲದ ಪ್ರಕಾರ ಉಪ ವ್ಯವಸ್ಥಾಪಕ ನಿರ್ದೇಶಕರಾದ ಖೇಮಾನಿಯವರು ಈ ಚಟುವಟಿಕೆಗಳನ್ನು ಗೋಯ್‌ಪೋರಿಯಾ ರವರಿಗೂ ಇವರು ವಿಷಯವನ್ನು ಏಪ್ರಿಲ್ 27 ರಂದು ನಿರ್ದೇಶಕ ಮಂಡಲಿಗೂ ವರದಿಮಾಡಿದರು. ಆದರೆ ಗೋಯ್‌ಪೋರಿಯಾರವರು "ಇದರ ಪೂರ್ವ ಚರಿತೆ ನನಗೆ ತಿಳಿದಿಲ್ಲ" ಎಂದು ಹೇಳಿರು ತ್ತಾರೆ. ಮತ್ತೊಂದು ಮೂಲದ ಪ್ರಕಾರ—ಖೇಮಾನಿಯವರು ಭಾರತೀಯ ಸ್ಟೇಟ್ ಬ್ಯಾಂಕಿನ ವಿನಿಯೋಜನ ಸಮಿತಿಯ ಮುಖ್ಯಸ್ಥರಾಗಿದ್ದರು. ನಿರ್ಧಾರ ಕೈಗೊಳ್ಳುವುದೂ ಇವರೇ. ಬೆಲೆ ನಿಗದಿ ಪಡಿಸಿ ಭಾರತೀಯ ಸ್ಟೇಟ್ ಬ್ಯಾಂಕಿಗೆ ನಷ್ಟವನ್ನೂ ಮೆಹ್ತಾ ಗುಂಪಿಗೆ ಲಾಭವನ್ನೂ ಉಂಟು ಮಾಡಲು ಈ ಸಮಿತಿ ಬಹಳಷ್ಟು ಕಾರಣವಾಗಿದೆ. ನಿರ್ಧಾರ ತೆಗೆದುಕೊಳ್ಳುವುದು ವಿಕೇಂದ್ರೀಕೃತವಾಗಿದ್ದಿದ್ದರೆ ಬಹುಶಃ ವಂಚನೆ ಮಾಡುವುದು ಕಷ್ಟವಾಗು ತ್ತಿತ್ತೇನೊ ? ಕಿರಿಯ ಅಧಿಕಾರಿಗಳು ಯಾವ ರೀತಿಯ ವ್ಯಾಪಾರವನ್ನು ಮಾಡುತ್ತಿದ್ದರು ಮತ್ತು ಮೆಹ್ತಾ–ಸೀತಾರಾಮರ ಸಂಬಂಧ ತಮಗೇನೂ ತಿಳಿದಿಲ್ಲವೆಂದು ಉಚ್ಚ ನಿರ್ವಹಣಾಧಿಕಾರಿಗಳು ಹೇಳಿದ್ದಾರೆ. "ಹಣ ವಾಪಸ್ ಮಾಡಿ ಅಥವಾ ಪ್ರತಿಭೂತಿಗಳನ್ನು ತಲುಪಿಸಿ" ಎಂದು ಖೇಮಾನಿ ಯವರು ಮೆಹ್ತಾರಿಗೆ ಆದೇಶ ನೀಡಿದಾಗ ಮೆಹ್ತಾರವರು ಅತ್ಯಂತ ಭಾರಿ ಚಕ್ಕನ್ನು ನೀಡಿದರು. "ಪ್ರತಿಭೂತಿಗಳ ಮೊತ್ತದಲ್ಲಿ ಕೆಲವೇ ಮಾತ್ರ ಕೈಸೇರಲಿಲ್ಲಅಷ್ಟೇ. ಅದೂ ಅಲ್ಲದೆ ಭಾರತೀಯ ಸ್ಟೇಟ್ ಬ್ಯಾಂಕಿಗೆ 9 ಕೋಟಿ ರೂಪಾಯಿ ಲಾಭವಾಗಿದೆ ಎಂದು ಭಾರತೀಯ ಸ್ಟೇಟ್ ಬ್ಯಾಂಕ್ ತನ್ನನ್ನು ತಾನೆ ರಕ್ಷಿಸಿಕೊಂಡಿದೆ.

## ಇತರ ಆಟಗಾರರು

ಈ ಮೋಸದ ಪ್ರಕರಣದಲ್ಲಿರುವ ಹಣದ ಮೊತ್ತ 622 ಕೋಟಿ ಎಂದು ಎಲ್ಲರೂ ತಿಳಿದಿದ್ದರು. ಆದರೆ ಪ್ರಸ್ತುತ ಹಾಗಾಗಲಿಲ್ಲ. ಅದು ಅಕ್ಷಯ ಪಾತ್ರೆ ಆಯಿತು. ಈ ಕ್ರೀಡೆಯಲ್ಲಿ ಇನ್ನೂ ಅನೇಕ ಪಟುಗಳಿದ್ದಾರೆ.

ಯುಕೋ ಬ್ಯಾಂಕು—ಮೆಹ್ತಾರ ಹಣ ಚಕ್ರೀ ಕರಣಕ್ಕೆ ಈ ಬ್ಯಾಂಕು ಒಂದು ಮಾಧ್ಯಮ. ಇದರಲ್ಲಿ ರಿಲೈಯನ್ಸ್ ಭಾರಿ ಫಲಾನುಭವಿ ಸಂಸ್ಥೆಯಾಗಿದೆ. ಮಾರ್ಚ್ 30ರಂದು ಮೆಹ್ತಾರವರು ಷೇರು ಒಂದಕ್ಕೆ ರೂ 285ರಂತೆ 1 ದಶಲಕ್ಷ ಷೇರುಗಳನ್ನು ಖರೀದಿಸಿದರು. 10 ದಿನಗಳಲ್ಲಿ ಶೇರಿನ ಬೆಲೆ 440 ರೂ.ಗಳಿಗೆ ಜಿಗಿಯಿತು. ಐರೋಪ್ಯ ಪೇಟೆಯಲ್ಲಿ ಹಾಗೂ ಭಾರತದಲ್ಲೇ ಭಾರಿ ಬಂಡವಾಳ ಎತ್ತುವ ಸದವಕಾಶವನ್ನು ಎದುರು ನೋಡುತ್ತಿರುವ ಆರ್.ಐ.ಎಲ್. ಸಂಸ್ಥೆಗೆ ಇದು ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ಭಾರಿ ಸೇವಾ ಶುಲ್ಕ ಗಳಿಸುವ ಈ ವಹಿವಾಟು ಬ್ಯಾಂಕಿಗೆ ತೃಪ್ತಿತಂದಿತು.

ಮೆಹ್ತಾರವರ ಮಾಜ್ದಾ ಮತ್ತು ಗ್ರೋಮೋರ್ ಸಂಸ್ಥೆಗಳು ಮಾರ್ಚ್ 24, 1992ರಂದು ಯುಕೊ ಬ್ಯಾಂಕಿನಲ್ಲಿ ಮೂರು ಚಾಲ್ತಿ ಖಾತೆಯನ್ನು ಆರಂಭಿಸಿದುವು. ಅದೇ ದಿನ ಮೆಹ್ತಾರವರು ತಯಾರಿಸಿದ 50.37 ಕೋಟಿ ಮೊತ್ತದ 30 ದಿನಗಳ ಅವಧಿಯುಳ್ಳ ಎರಡು ಹುಂಡಿಗಳನ್ನು ಶೇ. 22.5 ಬಡ್ಡಿಯಂತೆ ಯುಕೊ ಬ್ಯಾಂಕ್ ಮುರಿಸಿತು. ವಟಾವಣೆಯನಂತರ ಬಂದ ಹಣವನ್ನು ಆರ್. ಐ. ಎಲ್., ಎ.ಸಿ.ಸಿ. ಹಾಗೂ ಎಸ್.ಸಿ.ಐ (ಭಾರತೀಯ ಹಡಗು ನಿಗಮ) ಷೇರುಗಳನ್ನು ಕೊಳ್ಳಲು ಉಪ ಯೋಗಿಸಲಾಯಿತು. 4.5 ಕೋಟಿ ಮೌಲ್ಯದ 15,000ಷೇರುಗಳನ್ನುಗ್ರೋಮೋರ್ ಸಂಸ್ಥೆಯೂ 26 ಕೋಟಿ ಮೌಲ್ಯದ 8,50,000 ಷೇರುಗಳನ್ನು ಮಾಜ್ದ ಸಂಸ್ಥೆಯೂ ಖರೀದಿಸಿದುವು. ವಟಾವಣೆ ಯಿಂದ ಯುಕೊ ಬ್ಯಾಂಕ್ 22 ಲಕ್ಷ ರೂಪಾಯಿ ಗಳ ಲಾಭ ಪಡೆದು ತೃಪ್ತಿ ವ್ಯಕ್ತಪಡಿಸಿತು. ಒಂದು ತಿಂಗಳ ಅವಧಿಯ ಅನಂತರ, ಅಂದರೆ 24-4-92 ರಂದು ಮೆಹ್ತಾರವರು ಹುಂಡಿ ಹಣದ ವ್ಯವಸ್ಥೆ ಮಾಡಲಿಲ್ಲ. ಈ ಅವಧಿಯನ್ನು ಅವರು ಅತ್ಯಂತ ನಾಜೂಕಾದ ರೀತಿಯಲ್ಲಿ ತಮ್ಮದೇ ಆದ ದ್ವಿಮುಖಿ ವಹಿವಾಟಿನ ತಂತ್ರದಿಂದ ಉಪಯೋಗಿಸಿಕೊಂಡರು. ಅನಂತರ ದಳ್ಳಾಳಿ ವಿ.ಬಿ.ದೇಸಾಯಿ ಮೂಲಕ 49.5 ಕೋಟಿ ಮೌಲ್ಯದ 8 ಲಕ್ಷ ಗುಜರಾತ್ ಅಂಬುಜ ಷೇರುಗಳನ್ನು ಯುಕೊ ಬ್ಯಾಂಕ್ ಕೊಳ್ಳುವಂತೆ ಮಾಡಿದರು. ಷೇರುಗಳು ಕೈಗೆ ಬಾರದೆಯೇ ವಹಿವಾಟುಗಳು ಜರುಗಿದುವು. ವಿ. ಬಿ. ದೇಸಾಯಿ ಯಿಂದ ಹಣವು ಎ. ಎನ್. ಜೆಡ್. ಗ್ರಿಂಡ್ಲೇಸ್ ಬ್ಯಾಂಕಿನಲ್ಲಿದ್ದ ಮೆಹ್ತಾರ ಖಾತೆಗೆ ಜಮ ಆಯಿತು. ಮುಸುಕಿನಲ್ಲೇ ನಡೆದ ಈ ಅವ್ಯವಹಾರಕ್ಕೆ ಸೂತ್ರ ಧಾರಿ ಯುಕೊ ಬ್ಯಾಂಕಿನ ಅಧ್ಯಕ್ಷ ಮಾರ್ಗ ಬಂಧುವಿನ ಖಾಸ ಎಸ್. ವಿ. ರಂಗನಾಥನ್. 15 ಕೋಟಿ ಮೌಲ್ಯದ ಬಿ. ಆರ್. ಹಾಗೂ ಎಸ್. ಜಿ. ಎಲ್. ನ ನಮೂನೆಗಳನ್ನು ಮಾನಸಿಕವಾಗಿ ತೇಲಿಸ ಲಾಯಿತು. 90 ದಿನಗಳಾದರೂ ಷೇರುಗಳ ಆಗಮನವೇ ಇಲ್ಲ. ಕೊನೆಗೆ ಯುಕೊ ಬ್ಯಾಂಕು 62 ಕೋಟಿ ನಷ್ಟ ಅನುಭವಿಸಿತು.

ರಾಷ್ಟ್ರೀಯ ಗೃಹ ವಸತಿ ಬ್ಯಾಂಕು—ಇದೂ ಸಹ ಮೆಹ್ತಾರಿಗೆ ಒಂದು ಮಾಧ್ಯಮ. ಭಾರತೀಯ ಸ್ಟೇಟ್ ಬ್ಯಾಂಕಿನ ಋಣ ತೀರಿಸುವುದೇ ಘನ ಉದ್ದೇಶವಾಗಿತ್ತು. ಇಲ್ಲಿಯೂ ಅದೇ ಗೋಳು, ಕಾರಣ, ವಿಧಾನ. ರಾ. ಗೃ. ಬ್ಯಾಂ. ಪ್ರತಿಭೂತಿ ಪೇಟೆಯಲ್ಲಿ ವ್ಯವಹರಿಸಲು ಕಟ್ಟುಪಾಡಿತ್ತು. ಅದೂ ಅಲ್ಲದೆ ದಳ್ಳಾಳಿಗಳಿಗೆ ಮಧ್ಯವರ್ತಿಯಾಗಿ ಕೆಲಸ ಮಾಡಿತು ಮತ್ತು ಧೃವತ್ವ ನಿಯಮದ ಬಗೆ ನಿಗಾ ಇಡಲಿಲ್ಲ. 400 ಕೋಟಿ ರೂ.ಗಳನ್ನು ನಾನಾ ಮೂಲಗಳಿಂದ ಸಂಗ್ರಹಿಸಿ ಪ್ರತಿಭೂತಿಗಳನ್ನು ತಲುಪಿಸದೆ ಕೇವಲ ಬಾಯಿಮಾತಿನ ಆಧಾರದಿಂದ ಎ. ಎನ್. ಜೆಡ್. ಗ್ರಿಂಡ್ಲೇಸ್ ಬ್ಯಾಂಕಿನಲ್ಲಿದ್ದ ಮೆಹ್ತಾರ ಖಾತೆಗೆ ಜಮಾ ಮಾಡಲಾಯಿತು. ರಾಷ್ಟ್ರೀಯ ಗೃಹ ವಸತಿ ಬ್ಯಾಂಕಿನ ಕಿರಿಯ ನಿರ್ವಹಣಾ ಅಧಿಕಾರಿಗಳಾದ ರವಿಕುಮಾರ್, ಸುರೇಶ್ ಬಾಬು ಹಾಗೂ ಶಿವಕುಮಾರ ಕುತಂತ್ರದಿಂದ ಹೊರಡಿಸಿದ ಖೋಟಾ ಬ್ಯಾಂಕರ್ ರಸೀತಿಗಳೆಲ್ಲಾ ಅನೂರ್ಜಿತವಾದುವು. ರಾ. ಗೃ. ಬ್ಯಾಂಕಿಗೆ 400 ಕೋಟಿ ವಾಪಸಾಗಲಿಲ್ಲ. ಇಷ್ಟು ವಹಿವಾಟುಗಳು ಜರುಗಿವೆ ಎಂಬುದಕ್ಕೆ ರಾ. ಗೃ. ಬ್ಯಾಂ. ಬಳಿ ದಸ್ತಾವೈಜಾಧಾರಿತವಾದ ಸಾಕ್ಷ್ಯಗಳಾವುವೂ ಇಲ್ಲ. ಈ ಅವ್ಯವಹಾರಗಳು ಜರುಗಿದಾಗ ತಾವು ಗೋವಾದಲ್ಲಿದ್ದರೆಂದೂ ಮತ್ತು ಇವುಗಳ ಹಿನ್ನೆಲೆ ತಮಗೆ ತಿಳಿಯದೆಂದೂ ಎನ್. ಹೆಚ್. ಬಿ. ಮುಖ್ಯಸ್ಥ ದಿ॥ ಫೇರ್ವಾನಿಯವರು ಹೇಳಿದ್ದರು.

ದ್ವಿತೀಯ ಪ್ರಕರಣ—ಇದರ ಮುಖ್ಯ ಸೂತ್ರಧಾರಿ ಭೂಪೆನ್ ದಲಾಲ್ ಮತ್ತು ಅವರ ಸಂಗಡಿಗರಾದ ನರೋತ್ತಮ್, ಹಿತೇನ್ ದಲಾಲ್, ವಿ. ಬಿ. ದೇಸಾಯಿ, ರಾಯ, ಗಾಂಧಿ ಮುಂತಾದವರು. ಇಲ್ಲಿ ಸಿಲುಕಿರುವ ಬ್ಯಾಂಕುಗಳು ಕರಾಡ್ ಬ್ಯಾಂಕ್, ಮಹಾನಗರ ಸಹಕಾರಿ ಬ್ಯಾಂಕ್, ಸ್ಟ್ಯಾನ್‌ಚಾರ್ಟ್, ಕ್ಯಾನ್‌ಫಿನ, ಕ್ಯಾನ್ ಮ್ಯೂಚುವಲ್ಸ್, ಭಾ. ಸ್ಟೇ. ಬ್ಯಾಂ. ಕ್ಯಾಪ್ಸ್, ಮಧುರಾ ಬ್ಯಾಂಕ್ ಇತ್ಯಾದಿ. ಈ ಪ್ರಕರಣದಲ್ಲಿ ಮೆಹ್ತಾರ ಕೈವಾಡ/ಪ್ರಭಾವ ಇದೆಯೇ ಎಂಬ ಪ್ರಶ್ನೆಗೆ "ಇಲ್ಲ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಇಲ್ಲೂ ಅದೇ ವಿಧಾನಗಳನ್ನು ಅಳವಡಿಸಲಾಗಿದೆ" ಎಂದು ಸಿ. ಬಿ. ಐ.ನ ಮಾಧವನ್ ಅಭಿಪ್ರಾಯಪಟ್ಟಿದ್ದಾರೆ.

ಉತ್ತರ ಕಾಂಡ—ಜಾನಕಿರಾಮನ್ (ಭಾರತೀಯ ಸ್ಟೇಟ್ ಬ್ಯಾಂಕಿನ ಉಪಗವರ್ನರ್) ಸಮಿತಿ ವರದಿ ಪ್ರಕಾರ ಪ್ರಕರಣಗಳಲ್ಲಿರುವ ಹಣದ ಮೊತ್ತ 622 ಕೋಟಿಯಿಂದ 3078ಕ್ಕೆ ಏರಿ ಇನ್ನೂ ಮುಂದುವರಿದು ಈಗ 5000 ಕೋಟಿ ರೂಪಾಯಿಗಳ ಮೊತ್ತವನ್ನು ಮೀರುವ ಸಾಧ್ಯತೆ ಇದೆ. ದೇಶದ ಚರಿತ್ರೆಯಲ್ಲೇ ಇವು ಅದ್ವಿತೀಯ ಪ್ರಸಂಗಗಳಾಗಿವೆ. ಹಲವಾರು ವರ್ಷಗಳ ಹಿಂದೆ ಯು.ಎಸ್.ಎ.ನಲ್ಲಿ ಇಂಥಾದ್ದೇ ಪ್ರಸಂಗ ಜರುಗಿದೆ. ಅಲ್ಲಿ ಇದನ್ನು ಒಳಾಂಗಣ ವ್ಯವಹಾರ (Insider Trading) ಎಂದು ಕರೆಯುವರು. ಇಲ್ಲಿಯ ಮೆಹ್ತಾರಂತೆ ಅಲ್ಲಿ ಮ್ಯಾಕ್ ಮಿಲನ್, ಡ್ರೆಕ್ಸಲ್ ಲ್ಯಾಂಬರ್ಟ್ ಎಂಬ ಸಂಸ್ಥೆಯಲ್ಲಿ ಅಧಿಕಾರಿ. ಸಂಬಳ + ಬೋನಸ್ ಸೇರಿ 500 ಮಿಲಿಯನ್ ಡಾಲರ್ ಪಡೆದು ದಾಖಲೆ ಸ್ಥಾಪಿಸಿರುತ್ತಾರೆ. ಇವರ ವಹಿವಾಟಿನ ಬಗ್ಗೆ ಸಂಶಯ ಬಂದು ಒಳಾಂಗಣ ವ್ಯವಹಾರದಲ್ಲಿ ತೊಡಗಿದ್ದ ಅಪಾದನೆಗಾಗಿ ಜೈಲು ಶಿಕ್ಷೆ ಆಯಿತು. ಅವರು ಗಳಿಸಿದ್ದನ್ನೆಲ್ಲಾ ಕಕ್ಕಿದರು.

ಖೋಟಾ ಬಿ.ಆರ್.ಗಳು ಮತ್ತು ಎಸ್.ಜಿ.ಎಲ್. ನಮೂನೆಗಳು, ವಿಳಂಬ ತಾಳೆ ವ್ಯವಸ್ಥೆ, ಬ್ಯಾಂಕುಗಳ ಅಲಕ್ಷ್ಯ ಮತ್ತು ರಿಸರ್ವ್ ಬ್ಯಾಂಕಿನ ಕಳಪೆ ಮೇಲ್ವಿಚಾರಣೆ ಹಾಗೂ ನಿರೀಕ್ಷಣ ಕಾರ್ಯಕ್ರಮಗಳಿಂದ ಆಗಬಾರದ್ದು ಆಯಿತು. ಷೇರುಪೇಟೆ ಅವ್ಯವಹಾರ ಎಂದು ಕರೆಯುವ ಬದಲು ಬ್ಯಾಂಕುಗಳ ಅವ್ಯವಹಾರ ಎಂದರೆ ಸರಿಹೋಗುತ್ತೆ. ತೊಡಗಿರುವ ಬ್ಯಾಂಕುಗಳ ದುಸ್ಥಿತಿಗೆ ಸಾರ್ವಜನಿಕ ಸಹಾನುಭೂತಿ ಇಲ್ಲ. 'ಮಾ ಡಿ ದ್ದು ಣ್ಣೋ ಮಹರಾಯ' ಎಂದು ಎಲ್ಲರೂ ಛೀಮಾರಿ ಹಾಕುತ್ತಿದ್ದಾರೆ. ಟೀಕೆ ಚಪ್ಪರ ಸೃಷ್ಟಿಯಾಯಿತು.

"ಖೋಟಾ ಎಸ್. ಜಿ. ಎಲ್. ನಮೂನೆಗಳ ಜೊತೆ ಕೆಲವು ಸಾಚಾ ಎಸ್.ಜಿ.ಎಲ್. ನಮೂನೆಗಳು ಸಾರ್ವಜನಿಕ ಕಛೇರಿಯಲ್ಲಿ ನೋಂದಾಯಿಸಲಾಗಿದೆಯಲ್ಲಾ. ಇದಕ್ಕೇನು ಉತ್ತರ ಕೊಡುವುದು ರಿಸರ್ವ್ ಬ್ಯಾಂಕ್?"—**ಮಧುರಾ ಬ್ಯಾಂಕಿನ ಅಧ್ಯಕ್ಷ ಸಭಾಪತಿ**

"ಗೌರ್ನರ್ ರಾಜೀನಾಮೆ ನೀಡಲಿ, ಆರ್.ಬಿ.ಐ.ನ ಅದಕ್ಷತೆ ಎದ್ದು ಕಾಣುವುದು. ಬ್ಯಾಂಕುಗಳು—ದಳ್ಳಾಳಿಗಳು ಕ್ರಮವಿಲ್ಲದೆ ಹಣ ಲಪಟಾಯಿಸಿದ್ದಾರೆ."—**ಅ ಖಿ ಲ ಭಾ ರ ತ ಬ್ಯಾಂಕ್ ಉದ್ಯೋಗಿಗಳ ಸಂಘ**

"ಒಂದು ಬಿಡಿಗಾಸೂ ಖರ್ಚುಮಾಡದೆ ಮೇಲಿಂದ ಮೇಲೆ ಲಾಭ ಗಳಿಸುವ ಕಲೆಯನ್ನು ಮೆಹ್ತಾ ಚೆನ್ನಾಗಿ ಬಲ್ಲರು"—**ದೆಹಲಿ ಷೇರು ಪೇಟೆಯ ಅಧ್ಯಕ್ಷ ಎಚ್. ಬಾಟಿಸ್**

"ಮೆಹ್ತಾರವರು 1 ಲಕ್ಷ ಕೋಟಿ ಮೌಲ್ಯದ ಪ್ರತಿಭೂತಿಗಳ ಪೇಟೆಯನ್ನು ಧ್ವಂಸಮಾಡಿದ್ದಾರೆ"—**ದಳ್ಳಾಳಿ ಸಮುದಾಯ**

"ವಿದೇಶಿ ಹೂಡಿಕೆಗಾಗಿ ಎದುರು ನೋಡುತ್ತಿರುವ ಇಡೀ ಭಾರತಕ್ಕೇ ಭಾರಿ ಪೆಟ್ಟು"—**ಎ ಎನ್.ಜೆಡ್.ನ ಕೇಂದ್ರ ಕಛೇರಿ**

ಈ ಪ್ರಕರಣದ ಪ್ರಥಮ ಬಲಿಪಶು ಫೇರ್ವಾನಿ. ಯುಕೊ ಬ್ಯಾಂಕಿನ ಮಾರ್ಗಬಂಧು ವಜಾ ಆದರು. ಗೋಯಿಸ್‌ಪೋರಿಯರವರನ್ನು ರಜೆಕೊಟ್ಟು ಕಳುಹಿಸಲಾಗಿದೆ. ಇದು ಶಾಲು ಸುತ್ತಿ ಹೊಡೆದಂತೆ. 'ಸಸ್ಪೆಂಡ್'ನ ಇನ್ನೊಂದು ಮುಖ. ಪೇಮಾನಿ, ಶಿವಕುಮಾರ್ ಸೀತಾರಾಮ್ ಮುಂತಾದವರನ್ನು ಸಸ್ಪೆಂಡ್ ಮಾಡಲಾಗಿದೆ. ಜೂನ್ 4-92 ಮೆಹ್ತಾರ ಜೀವನದಲ್ಲಿ ಒಂದು ಕರಾಳ ದಿನ. ಅವರ ಕುಟುಂಬವೂ ಸೇರಿ ಒಟ್ಟು 44 ಜನರನ್ನು ದಸ್ತಗಿರಿ ಮಾಡಿ ರಾಷ್ಟ್ರಾಧ್ಯಕ್ಷರ ಆಜ್ಞೆಯಂತೆ ಇವರುಗಳ ಆಸ್ತಿಯನ್ನು ಜಪ್ತಿಮಾಡಲಾಗಿದೆ. "ನಾನೇನೂ ಅಂಥಾ ತಪ್ಪು ಮಾಡಿಲ್ಲ. ಕ್ರಮೇಣ ನಿಮಗೇ ಎಲ್ಲಾ ತಿಳಿಯುವುದು" ಎಂದು ಮೆಹ್ತಾರವರು ದಸ್ತಗಿರಿಯಾದಾಗ ಹೇಳಿದರು. ವರಮಾನ ತೆರಿಗೆ ಅಧಿಕಾರಿಗಳಿಂದ ದೇಶಾದ್ಯಂತ ಮೆಹ್ತಾರವರ ವಸತಿ-ವಠಾರಗಳ ಮೇಲೆ ಧಾಳಿ ಮತ್ತು ಸಿ.ಬಿ.ಐ.ನಿಂದ ವಶಾವಣೆ ಕೆಲಸ ಭರದಿಂದ ಸಾಗುತ್ತಿದೆ. ಗ್ರೋಮೋರ್ ಸಂಸ್ಥೆಯ ಅಧ್ಯಕ್ಷ ಖಂಡೇಲ್‌ವಾಲರು ಮೆಹ್ತಾರವರ ಪರವಾಗಿ ಸುಮಾರು 40 ಕೋಟಿ ಮೌಲ್ಯದ ಷೇರುಗಳನ್ನು 15 ಪೆಟ್ಟಿಗೆಗಳಲ್ಲಿ ಅವರ ದೆಹಲಿ ನಿವಾಸದಲ್ಲಿಟ್ಟಿದ್ದು ಇವನ್ನು ಸಿ. ಬಿ. ಐ. ವಶಪಡಿಸಿಕೊಂಡಿತು. ಖೋಟಾ ಸಹಿ, ವಂಚನೆ-ಪಿತೂರಿಗಳಿಂದ ಹಣ ಲಪಟಾಯಿಸಿರುವುದು, ನಿರ್ಲಕ್ಷ್ಯ ಮುಂತಾದ ಆಪಾದನೆಗಳು ಸಾಬೀತಾದರೆ ಆಪಾದಿತರಿಗೆ 10 ವರ್ಷಗಳ ಸಜಾ ಎಂದು ವಿಶೇಷ ನ್ಯಾಯಾಧೀಶರು ಹೇಳಿಕೆಯನ್ನಿತ್ತಿದ್ದಾರೆ.

ಬೊಂಬಾಯಿ ಷೇರುಪೇಟೆ ಮೆಹ್ತಾ ಮತ್ತು ಸಂಗಡಿಗರನ್ನು ಸಸ್ಪೆಂಡ್ ಮಾಡಿದೆ. ನ್ಯಾಯಾಲಯದ ಆದೇಶದಿಂದ ಹರ್ಷಾದ್ ಮೆಹ್ತಾರ ಹಣವನ್ನು ಬಿಡುಗಡೆ ಮಾಡಿಸಿ ಪಾವತಿ ಕ್ಷೋಭೆಯನ್ನು ತಪ್ಪಿಸಿತು. ಆದರೆ ಯಾವ ಯಾವ ವ್ಯಕ್ತಿಗಳಿಗೆ ಷೇರುಗಳನ್ನು ಮಾರಿದ್ದಾರೆ ಎಂಬ ವಿಷಯವು ಮುಸುಕಿನಲ್ಲಿರುವುದರಿಂದ ಕಂಪೆನಿಗಳು ಶೇರು ವರ್ಗಾವಣೆಯನ್ನು ಸ್ವೀಕರಿಸುತ್ತಿಲ್ಲ. ಜೂನ್ 15 ರಿಂದ ಭಾರತದ ಪ್ರಮುಖ ಷೇರುಪೇಟೆಯಲ್ಲಿ ಯಾವ ವ್ಯವಹಾರವೂ ಜರುಗಿಲ್ಲ. ಬಿ. ಆರ್. ಗಳನ್ನು ಯಾರೂ ಒಪ್ಪುತ್ತಿಲ್ಲ. ಭಾರಿ ಪ್ರತಿಫಲವನ್ನು ನಿರೀಕ್ಷಿಸುತ್ತಿದ್ದವರು ಅಧೋಗತಿ ಹೊಂದಿದರು. ನಂಬಿಕೆ ಹಾಗೂ ವಿಶ್ವಾಸ ಛಿದ್ರ ವಾಯಿತು. ಇಡೀ ದಳ್ಳಾಳಿ ಸಮುದಾಯಕ್ಕೆ ತೀವ್ರಹಾನಿಯಾಗಿದೆ. ಬೊಂಬಾಯಿಯ ಶಾಂತಿಲಾಲ್ ಜವೇರಿ ತಮ್ಮ ವ್ಯಾಪಾರ ಮಳಿಗೆಯನ್ನು ಮಾರಿದರು. ಬಕುಲ್ ಷಾ ಶೇ. 30ರಷ್ಟು ಸೋಡಿ ಬಿಟ್ಟು ವ್ಯಾಪಾರವನ್ನು ಮಾರಲು ಮುಂದೆ ಬಂದಿದ್ದಾರೆ. ಖ್ಯಾತ ತಿಂಡಿ ತಿನಿಸುಗಳ ಸಂಸ್ಥೆ ಹಲ್ದಿರಾಮ್ ಬುಜಿಯವಾಲಾ ದೆಹಲಿ ವ್ಯಾಪಾರವನ್ನು ಮಾರಿದರು. ಬಂಧು-ಮಿತ್ರರು ಮೆಹ್ತಾರಿಂದ ದೂರವಾದರು. ಮೆಹ್ತಾರವರ 1500 ಕೋಟಿ ಮೌಲ್ಯದ ಆಸ್ತಿ ಕರ್ಪೂರದ ಬೊಂಬೆ, ಆಯಿತು. ಅವರ ಷೇರುಗಳ ಆಸ್ತಿಯ ಮೌಲ್ಯ 900 ಕೋಟಿಯಿಂದ 300 ಕೋಟಿಗೆ ಕುಸಿಯಿತು. ಸಟ್ಟಾಧಾರಿತವಾದ ಷೇರುಗಳಿಗೆ ತೀವ್ರ ಪೆಟ್ಟು ಬಿತ್ತು. ವಿನಿಮಯ ಪೇಟೆಯ ಸೂಕ್ಷ್ಮ ಸೂಚಿ ತಳಲೋಕ ನೋಡುತ್ತಿತ್ತು. ಅವರ ತೆರಿಗೆ ಹೊಣೆ 8,000 ಕೋಟಿ ರೂಪಾಯಿಗಳು ಎಂದು ಬೊಂಬಾಯಿಯ ತೆರಿಗೆ ಕಮಿಷನರ್ ಅಭಿಪ್ರಾಯಪಟ್ಟಿದ್ದಾರೆ.

ಎರಡನೆ ಮೋಸದ ಪ್ರಕರಣದ ಬಗ್ಗೆ ಭೂಪೆನ್ ದಲಾಲ್ ಮತ್ತು ಸಂಗಡಿಗರನ್ನು ದಸ್ತಗಿರಿ ಮಾಡಲಾಯಿತು ಮತ್ತು ಬೊಂಬಾಯಿ ಸ್ಟಾಕ್ ವಿನಿಮಯಕೇಂದ್ರ ಅವರುಗಳನ್ನು ಅಮಾನತು

ಗೊಳಿಸಿತು. ರಿಸರ್ವ್ ಬ್ಯಾಂಕ್ ಆಜ್ಞೆ ಮೇರೆಗೆ ಕರಾಡ್ ಬ್ಯಾಂಕ್ ಮತ್ತು ಮಹಾನಗರದ ಸಹಕಾರಿ ಬ್ಯಾಂಕುಗಳನ್ನು ಸಮಾಪ್ತಗೊಳಿಸಲಾಯಿತು. ಸ್ಟಾನ್‌ಚಾರ್ಟ್‌ನ ಉನ್ನತ ಅಧಿಕಾರಿಗಳು ವಜಾ ಆದರು. ಇಂಡಿಯಾ ಫಂಡ್, ಇಂಡಿಯಾ ಗ್ರೋತ್ ಫಂಡ್, ಇಂಡಿಯಾ ಮ್ಯಾಗ್ನಮ್ ಫಂಡ್ ಮತ್ತು ಹಿಮಾಲಯ ಫಂಡ್–ಭಾರತದ ಈ 4 ಸಾಗರೋತ್ತರ ನಿಧಿಗಳಿಗೆ ಧಕ್ಕೆ ಉಂಟಾಗಿದೆ. ಶೇ. 40ರಷ್ಟು ಸೋಡಿ ಬಿಟ್ಟರೂ ವಹಿಸಿಕೊಳ್ಳುವವರಿಲ್ಲ. ಈ ಪ್ರಕರಣಗಳಲ್ಲಿರುವ ಸಂಸ್ಥೆಗಳು "ನೀವೇ ಕಾರಣ–ನೀವೇ ಕಾರಣ" ಎಂದು ಪರಸ್ಪರ ಕಿತ್ತಾಡುತ್ತಿವೆ. ರಾ. ಗೃ. ಬ್ಯಾ, ಹಾಗೂ ಭಾರತೀಯ ಸ್ಟೇಟ್ ಬ್ಯಾಂಕ್ ಕೇಂದ್ರ ಬ್ಯಾಂಕಿನ ಅಧೀನ ಸಂಸ್ಥೆಗಳಾದ್ದರಿಂದ ಆಕ್ಷೇಪಣೆ ಮಾಡಲು ಅವಕಾಶವಿಲ್ಲ. ಇದರಿಂದ ವಿದೇಶಿ ಬ್ಯಾಂಕುಗಳಿಗೂ ನ್ಯಾಯಬದ್ಧ ಪರಿಹಾರಕ್ಕೆ ಮೊಟಕು. ಆದರೂ ಅವು ನಷ್ಟವನ್ನು ಮುಚ್ಚುವ ಕಾರ್ಯವನ್ನು ಮಾಡಿವೆ.

ಕೇಂದ್ರ ಸರ್ಕಾರ ಹಾಗೂ ರಿಸರ್ವ್ ಬ್ಯಾಂಕ್ ತೆಗೆದುಕೊಂಡಿರುವ ಈ ಕೆಳಕಂಡ ಕ್ರಮಗಳು ಎಷ್ಟರ ಮಟ್ಟಿಗೆ ಪರಿಣಾಮಕಾರಿ ಎಂಬುದನ್ನು ಸಾವಧಾನವಾಗಿ ನೋಡಬೇಕಾಗಿದೆ.

1 ತೊಡಗಿರುವ ವಿದೇಶಿ ಬ್ಯಾಂಕುಗಳ ಲೈಸೆನ್ಸನ್ನು ಹಿಂದೆಗೆಯುವುದು.
2 ವಿದೇಶಿ ಬ್ಯಾಂಕುಗಳ ಸಂಪೂರ್ಣ ಲೆಕ್ಕ ಪರಿಶೋಧನೆ.
3 ಷೇರುಪೇಟೆಗಳಲ್ಲಿ ಪ್ರತಿಭೂತಿ ಖಾತೆ ವ್ಯವಸ್ಥೆಯನ್ನು ಯಾಂತ್ರೀಕರಿಸುವುದು.
4 ವಿಶೇಷ ನ್ಯಾಯಾಲಯದ ಸ್ಥಾಪನೆ.
5 ಇಂಟರ್‌ಪೋಲ್ ಪತ್ತೇದಾರಿ ಸಂಸ್ಥೆಯಿಂದ ನೆರವು.
6 ಪಾಲಿಗ್ರಾಫ್ ಹಾಗೂ ಸುಳ್ಳು ಪತ್ತೆ ಯಂತ್ರವನ್ನು ಬಳಸುವುದು.
7 ಅಂತರರಾಷ್ಟ್ರೀಯ ಹಣ ನಿಧಿಯ ಕೇಂದ್ರ ಬ್ಯಾಂಕಿಂಗ್ ವಿಭಾಗದ ವತಿಯಿಂದ ಶೇರು ಪೇಟೆಗಳಲ್ಲಿ ಉತ್ತಮ ವಿಧಾನಗಳನ್ನು ಅಳವಡಿಸುವ ಬಗ್ಗೆ ಸಲಹೆ.
8 ಅಕ್ರಮ ವ್ಯವಹಾರಗಳನ್ನು ತಡೆಯಲು ವಿಶೇಷ ವಿನಿಮಯದಾರರ ಮೇಲ್ವಿಚಾರಣಾ ಕಾರ್ಯಕ್ರಮಗಳು.
9 ಜಂಟಿ ಸಂಸತ್ ಸಮಿತಿಯ ರಚನೆ.
10 ಇಂಗ್ಲೆಂಡಿನಲ್ಲಿರುವ ಸೀರಿಯಸ್ ಫ್ರಾಡ್ ಆಫೀಸ್‌ನಂತೆ ಶಾಶ್ವತವಾದ ಸಂಸ್ಥೆಯ ನಿರ್ಮಾಣ.

### ಉಪಸಂಹಾರ

ಈ ಪ್ರಕರಣಗಳು ಹರ್ಷಾದ್ ಮೆಹ್ತಾರಂಥಾ ಒಬ್ಬಿಬ್ಬ ವ್ಯಕ್ತಿಯಿಂದಾಗಲಿ ಅಥವಾ ಒಂದೇ ದಿನದಲ್ಲಾಗಲಿ ಜರುಗಿಲ್ಲ. 1991ರಿಂದ ಹಂತಹಂತವಾಗಿ ಬೆಳೆದು ಭೂತಾಕಾರವಾಗಿದೆ. ಹಿನ್ನೆಲೆಯಲ್ಲಿ ಲಾಭ ಗಳಿಕೆಯ ಆಸಕ್ತಿ ಇದೆ. ರಾಜಕೀಯ ಆಸಕ್ತಿಯೂ ಇದೆ. ಆದರೆ ಸಾರ್ವಜನಿಕ ಹಿತಾಸಕ್ತಿ ಇಲ್ಲ. ಈ ಅವ್ಯವಹಾರಗಳಿಗೂ ಕೇಂದ್ರದ ಉದಾರ ನೀತಿಗೂ ಹತ್ತಿರ ಸಂಬಂಧವಿದೆಯೆಂದೂ ಈ ಪ್ರಕರಣಗಳು ಸಡಿಲೀಕರಣದ ಕೂಸೆಂದೂ ಶಂಕಿಸಲಾಗಿದೆ. ರಾಜಕಾರಣಿಗಳ ರಕ್ಷಣೆ ಇಲ್ಲದೆ ಬ್ಯಾಂಕ್ ಅಧಿಕಾರಿಗಳು ಧಾರಾಳವಾಗಿ ಲಂಚಕ್ಕೆ ಕೈ ಒಡ್ಡುತ್ತಿರಲಿಲ್ಲ ಎಂಬ ಗಾಳಿ ಮಾತು ಇದೆ. ಆದ್ದರಿಂದ—

1 ರಾಜಕೀಯ ಕೈವಾಡವನ್ನು ಬೆಳಕಿಗೆ ತರಬೇಕು.
2 ಬ್ಯಾಂಕಿಂಗ್ ಪದ್ಧತಿಯಲ್ಲಿರುವ ಒಡಕು ಹಾಗೂ ನ್ಯೂನತೆಗಳನ್ನು ಸರಿಪಡಿಸಬೇಕು.
3 ಭಾರತೀಯ ಸ್ಟೇಟ್ ಬ್ಯಾಂಕ್, ಭಾರತೀಯ ಸೆಕ್ಯುರಿಟಿ ಮತ್ತು ವಿನಿಮಯ ಮಂಡಲಿ, ವಿತ್ತ ಮಂತ್ರಾಲಯ, ವಾಣಿಜ್ಯ ಬ್ಯಾಂಕುಗಳು ಹಾಗೂ ಇತರ ಸಂಘ ಸಂಸ್ಥೆಗಳು ಹೆಚ್ಚಿನ ಜವಾಬ್ದಾರಿಯನ್ನು ವಹಿಸಿ ನೈತಿಕ ಮೌಲ್ಯದ ಗುರಿಯನ್ನು ಮುಟ್ಟಬೇಕು. ದೇಶದ ಹಿತಾಸಕ್ತಿಯನ್ನು ಮತ್ತು ವಿಶೇಷವಾಗಿ ಆರ್ಥಿಕ ರಂಗದ ಹಿತಾಸಕ್ತಿಯನ್ನು ಕಾಪಾಡಬೇಕು.
4 ಎಲ್ಲಕ್ಕಿಂತ ಮಿಗಿಲಾಗಿ ಮಾನವನ ಅತಿಯಾಸೆ ತೊಲಗಬೇಕು. ಕುತಂತ್ರಿಗಳ ಸಾಮರ್ಥ್ಯ ಎಷ್ಟಿದೆ ಎಂಬುದನ್ನು ಈ ಪ್ರಕರಣಗಳು ಚುಚ್ಚಿ ಚುಚ್ಚಿ ಹೇಳುತ್ತವೆ. ●

## ಗೋಯಿಪೋರಿಯಾ ಸಮಿತಿ ವರದಿ

# ಗ್ರಾಹಕ ಸೇವೆಯತ್ತ ಮತ್ತೊಂದು ಹೆಜ್ಜೆ

**ಬ್ಯಾಂಕರ್ ಮತ್ತು ಗ್ರಾಹಕ, ಇವರ ನಡುವಣ ಸಂಬಂಧವನ್ನು ಕುರಿತು ಬಹಳಷ್ಟು ಚರ್ಚೆ ಸದಾ ನಡೆಯುತ್ತಲೇ ಇದೆ. ಗ್ರಾಹಕನಿಗೆ ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಸೇವೆ ಸಲ್ಲಿಸುವುದೇ ಬ್ಯಾಂಕರನ ಕಸುಬು. ಇದಕ್ಕಾಗಿ ಶ್ರಮಿಸುವುದು ಅವನ ಕರ್ತವ್ಯ. ಇದು ಅನುಶಾಸನ. ಆದರೆ 'ಸಂತೃಪ್ತ ಗ್ರಾಹಕ' ಎಂಬುದು ಎಂದೂ ನಿಲುಕದ ಆದರ್ಶವೆ? ಗೋಯಿಪೋರಿಯಾ ಏನು ಹೇಳುತ್ತಾರೆ?**

**ಬಿ. ಎನ್. ಎನ್. ಮೂರ್ತಿ**
ಅಧಿಕಾರಿ
ಭಾರತೀಯ ಸ್ಟೇಟ್ ಬ್ಯಾಂಕ್
ಸಂತ ಮಾರ್ಕರ ರಸ್ತೆ, ಬೆಂಗಳೂರು–೧

ಬ್ಯಾಂಕಿಂಗ್ ಪ್ರಪಂಚದಲ್ಲಿ ಗ್ರಾಹಕನೇ ಪ್ರಭು. ಅವನನ್ನು ಓಲೈಸುವುದೇ ಬ್ಯಾಂಕರನ ಮೂಲ ಮಂತ್ರ. ದಿನಕಳೆದಂತೆ ಗ್ರಾಹಕನ ಬೇಡಿಕೆಗಳು ಹೆಚ್ಚುತ್ತಾ ಇವೆ. ಬ್ಯಾಂಕರು ಎಷ್ಟೇ ನಿಪುಣನಾಗಿದ್ದರೂ ಒಬ್ಬ ಸಂತೃಪ್ತ ಗ್ರಾಹಕನನ್ನು ಕಾಣುವುದು ವಿರಳ. ಹೀಗಾಗಿ ಗ್ರಾಹಕನ ನಿರೀಕ್ಷೆಯನ್ನು ಮುಟ್ಟಲು ಬ್ಯಾಂಕರನ ಓಟ ಒಂದು ನಿಲ್ಲದ ಕ್ರಿಯೆಯಾಗಿದೆ. ಭಾರತದ ಬ್ಯಾಂಕಿಂಗ್ ಪರಿಸ್ಥಿತಿ ಇದಕ್ಕೇನೂ ಹೊರತಲ್ಲ. ಶ್ರೀಸಾಮಾನ್ಯ, ಕೃಷಿಕ, ವ್ಯಾಪಾರಿ, ಉದ್ಯಮಿ, ಸರ್ಕಾರ, ಎಲ್ಲರೂ ಬ್ಯಾಂಕುಗಳಿಂದ ಹೆಚ್ಚು ಹೆಚ್ಚು ಸೇವಾ ಸೌಲಭ್ಯ ನಿರೀಕ್ಷಿಸುತ್ತಾರೆ. ಇದರಿಂದಾಗಿ ಗ್ರಾಹಕ ಸೇವಾ ಸಮೀಕ್ಷೆ, ವಿಶೇಷ ಸಮಿತಿ ವರದಿ, ನಿರ್ದೇಶನ ಇತ್ಯಾದಿಗಳು ಬ್ಯಾಂಕ್ ರಾಷ್ಟ್ರೀಕರಣವಾದಮೇಲೆ ಆಗಿಂದಾಗ್ಗೆ ನಡೆಯುತ್ತಾ ಬಂದಿವೆ.

ಈ ದಿಸೆಯಲ್ಲಿ 1972ರಲ್ಲಿ ಕೇಂದ್ರ ಸರ್ಕಾರ ಆರ್. ಜಿ. ಸರ್ರೈಯಾ ಅಧ್ಯಕ್ಷತೆಯಲ್ಲಿ ಬ್ಯಾಂಕಿಂಗ್ ಆಯೋಗ ನೇಮಿಸಿ ಅದರ ಅನೇಕ ಸಲಹೆಗಳನ್ನು ಕಾರ್ಯರೂಪಕ್ಕೆ ತಂದಿತು. ಅನಂತರ 1978ರಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್ ಅಧ್ಯಕ್ಷರಾದ ಆರ್. ಕೆ. ತಲ್ವಾರರ ನೇತೃತ್ವದಲ್ಲಿ ಒಂದು ತಂಡವನ್ನು ನೇಮಿಸಿತು. ಆ ಸಮಿತಿ 176 ಸಲಹೆಗಳನ್ನು ನೀಡಿತ್ತು. ನಂತರವೂ ಕೇಂದ್ರ ಸರ್ಕಾರ, ಭಾರತೀಯ ರಿಸರ್ವ್ ಬ್ಯಾಂಕ್ ಈ ದಿಸೆಯಲ್ಲಿ ಹಲವಾರು ಕ್ರಮಗಳನ್ನು ಕೈಗೊಂಡಿದೆ.

15-9-90ರಂದು ಗ್ರಾಹಕರ ಸೇವೆಯ ಬಗ್ಗೆ ಒಂದು ವರದಿ ಸಲ್ಲಿಸಲು ಕೇಂದ್ರ ಸರ್ಕಾರ

ಭಾರತೀಯ ಸ್ಟೇಟ್ ಬ್ಯಾಂಕ್ ಅಧ್ಯಕ್ಷ ಎಂ. ಎನ್. ಗೋಯ್‌ಪೋರಿಯಾರವರ ಅಧ್ಯಕ್ಷತೆಯಲ್ಲಿ 14 ಜನರ ಒಂದು ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿ ಪರಿಶೀಲಿಸಬೇಕಾಗಿದ್ದ ಅಂಶಗಳು ಇವು :

1 ಗ್ರಾಹಕನ ಸೇವಾಮಟ್ಟ ದಿನೇದಿನೇ ಕ್ಷೀಣಿಸುತ್ತಿರುವುದಕ್ಕೆ ಕಾರಣಗಳೇನು ?

2 ಯಾವ ವಿಭಾಗದಲ್ಲಿ ಗ್ರಾಹಕ ನಿರಾಶನಾಗಿದ್ದಾನೆ ಮತ್ತು ಅದನ್ನು ಸರಿಪಡಿಸುವ ಉಪಾಯಗಳೇನು ?

3 ಸೇವಾ ಸಂಸ್ಕೃತಿಯನ್ನು ಉತ್ತಮಗೊಳಿಸಿ ಬ್ಯಾಂಕ್ ಉದ್ಯೋಗಿಗಳು ಗ್ರಾಹಕನತ್ತ ಹೆಚ್ಚು ಗಮನ ಕೊಡಲು ಉಪಾಯಗಳು.

4 ಬ್ಯಾಂಕಿಂಗ್ ಕಾರ್ಯವಿಧಾನಗಳಲ್ಲಿ ಅಡಗಿರುವ ತೊಂದರೆಗಳನ್ನು ಗುರುತಿಸಿ, ಗ್ರಾಹಕರಿಗೆ ಉತ್ತಮ ಮತ್ತು ಶೀಘ್ರ ಸೇವೆ ನೀಡಲು ಮಾರ್ಗಗಳು.

5 ತಾಂತ್ರಿಕ ಜ್ಞಾನವನ್ನು ಹೆಚ್ಚಿಸಿ ಬ್ಯಾಂಕ್ ವ್ಯವಹಾರದಲ್ಲಿ ಅತ್ಯುತ್ತಮ ಗ್ರಾಹಕ ಸೇವೆ, ಉತ್ತಮ ಮನೆವಾರ್ತೆ, ಅಂಕಿ ಅಂಶಗಳ ಶೀಘ್ರ ಮಾಹಿತಿ, ಸುಧಾರಿಸಿದ ಮೇಲ್ವಿಚಾರಣೆ ಮತ್ತು ವ್ಯವಸ್ಥಾಪನೆ, ಮತ್ತೆಲ್ಲ ಪ್ರಕಾರಗಳಲ್ಲಿ ದಕ್ಷತೆ ಹೆಚ್ಚಿಸುವುದು.

ಸಮಿತಿ ಬ್ಯಾಂಕಿಂಗ್ ಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲ ವರ್ಗಗಳ ಅಭಿಪ್ರಾಯ ಪಡೆದು ಮತ್ತು ನೇರವಾಗಿ ತಾನೆ ಸಂಗ್ರಹಿಸಿದ ಹಲವಾರು ಮಾಹಿತಿಗಳನ್ನು ಪರಿಶೀಲಿಸಿ ಒಂದು ದೀರ್ಘವಾದ ವರದಿಯನ್ನು ಡಿಸೆಂಬರ್ 1991 ರಲ್ಲಿ ಸರ್ಕಾರಕ್ಕೆ ಸಲ್ಲಿಸಿದೆ. ಈ ಸಮಿತಿ 99 ಶಿಫಾರಸುಗಳನ್ನು ಮಾಡಿದೆ.

## ಶಿಫಾರಸುಗಳು

ಸಮಿತಿ ಶಿಫಾರಸು ಮಾಡಿರುವ ಕೆಲವು ಮುಖ್ಯ ಅಂಶಗಳು ಈ ಮುಂದಿನಂತಿವೆ :

1 ಮಹಾನಗರ ಮತ್ತು ನಗರ ಶಾಖೆಗಳಲ್ಲಿ ಬ್ಯಾಂಕ್ ಉದ್ಯೋಗಿಗಳು ತಮ್ಮ ಕೆಲಸ ಪ್ರಾರಂಭವಾಗುವ ವೇಳೆಗೆ 15 ನಿಮಿಷ ಮುನ್ನ ಹಾಜರಾಗಿರಬೇಕು.

2 ಹಣದ ವ್ಯವಹಾರ ಬಿಟ್ಟು ಮಿಕ್ಕೆಲ್ಲ ಗ್ರಾಹಕನ ಕೆಲಸಗಳನ್ನು ಬ್ಯಾಂಕ್ ಕೆಲಸ ಮುಗಿಯುವ ವೇಳೆಯ ಮುನ್ನ 1 ತಾಸಿನವರೆಗೆ ನಡೆಸಬೇಕು.

3 ಟೆಲ್ಲರ್ ಹಣ ಪಾವತಿ ಮಿತಿಯನ್ನು ರೂ. 5,000ಕ್ಕೆ ಏರಿಸುವುದು ; ಮತ್ತು ಅವಶ್ಯವಿರುವ ಎಲ್ಲಾ ಶಾಖೆಗಳಲ್ಲಿ ನೋಟು ಎಣಿಸುವ ಯಂತ್ರಗಳನ್ನು ಉಪಯೋಗಿಸುವುದು.

4 ಉಳಿತಾಯ ಖಾತೆಯ ಮೇಲೆ ಕೊಡುವ ಬಡ್ಡಿ ದರವನ್ನು ಹೆಚ್ಚಿಸುವುದು.

5 ಸಾವಧಿ ಠೇವಣಿಗೆ ಪಾಸ್ ಬುಕ್ ಸೌಲಭ್ಯ ಉಪಯೋಗಿಸುವುದು.

6 ಠೇವಣಿಯ ಮೇಲೆ ಕೊಡುವ ಬಡ್ಡಿ ದರ ಏರಿದಾಗ ಅದು ಹೊಸ ಠೇವಣಿಗಲ್ಲದೆ ಹಾಲಿ ಇರುವ ಠೇವಣಿಗೂ ಅನ್ವಯಿಸಬೇಕು.

7 ಬ್ಯಾಂಕ್ ಠೇವಣಿಗೆ ಆದಾಯ ತೆರಿಗೆ ರಿಯಾಯಿತಿ ಕೊಡುವುದು.

8 ಪೋಸ್ಟಲ್ ಆರ್ಡರ್ ತರಹ ಬ್ಯಾಂಕ್ ಆರ್ಡರ್‌ಗಳನ್ನು ಜಾರಿಗೆ ತರುವುದು.

9 ಗ್ರಾಹಕರಿಗೆ ಪರಊರಿನ ಚೆಕ್ಕುಗಳಿಗೆ ರೂ. 5,000ದ ವರೆಗೆ ತತ್‌ಕ್ಷಣ ಜಮಾ ಸೌಲಭ್ಯ.

10 ಶೀಘ್ರವಾಗಿ ಸಾಲ ಮಂಜೂರು ಮಾಡಲು ಶಾಖೆ/ವಲಯ ಕಛೇರಿ ಮತ್ತು ಪ್ರಧಾನ ಕಛೇರಿಯಲ್ಲಿ ಅನುಸರಿಸಬೇಕಾದ ಅನೇಕ ಶಿಫಾರಸುಗಳು.

11 ನಗರ ಪ್ರದೇಶದಲ್ಲಿ ಇನ್ನೂ ಹೆಚ್ಚು ಗಣಕೀಕರಣದ ಉಪಯೋಗ.

12 ಬ್ಯಾಂಕುಗಳನ್ನು ಗ್ರಾಹಕ ಸೇವಾ ಆಡಿಟ್‌ಗೆ ಒಳಪಡಿಸುವುದು.

13 ಯಾವ ಬ್ಯಾಂಕ್ ಶಾಖೆಯೂ ಅನುಕೂಲತಮ ಮಿತಿ ಮೀರಿರಬಾರದು. ಒಂದು ಮಾದರಿ ಶಾಖೆಯ ಮಿತಿ ಅದರ ಸಿಬ್ಬಂದಿ 100 ಮಂದಿ ಮತ್ತು ವ್ಯವಹಾರ 200 ಕೋಟಿ ರೂ.ಗಳು.

## ವಿಶ್ಲೇಷಣೆ

ಈ ಸಮಿತಿಯು ಹಿಂದಿನ ಕೆಲವು ಶಿಫಾರಸುಗಳನ್ನು ಇನ್ನೂ ಉತ್ತಮಗೊಳಿಸುವುದಕ್ಕೆ ಕೆಲವು ಹೊಸ ಪ್ರಯೋಗಗಳನ್ನು ಸೂಚಿಸಿದೆ. ಈ ವರದಿಯನ್ನು ವಿಶ್ಲೇಷಿಸಲು ಶಿಫಾರಸುಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು.

ಮೊದಲನೆಯದು ಸರ್ಕಾರವೇ ಏಕಪಕ್ಷೀಯವಾಗಿ ಕೆಲವು ಶಿಫಾರಸುಗಳನ್ನು ಜಾರಿಗೊಳಿಸಬಹುದು. ಉದಾಹರಣೆಗೆ : ಬ್ಯಾಂಕ್ ಠೇವಣಿಗಳ ಮೇಲಿನ ಬಡ್ಡಿ ದರವನ್ನು ಹೆಚ್ಚಿಸುವುದು, ಸಾವಧಿ ಠೇವಣಿಗೆ ಪಾಸ್ ಬುಕ್ ಸೌಲಭ್ಯ, ಬ್ಯಾಂಕ್ ಆರ್ಡರ್, ಬ್ಯಾಂಕುಗಳನ್ನು ಗ್ರಾಹಕ ಸೇವಾ ಆರ್ಡರ್‌ಗೆ ಒಳಪಡಿಸುವುದು, ಸಾಲ ಮಂಜೂರಾತಿಯಲ್ಲಿ ಸರಳೀಕರಣ / ಸುಧಾರಣೆಗಳು, ಇತ್ಯಾದಿ.

ಎರಡನೆಯದಾಗಿ ಇನ್ನಿತರ ಶಿಫಾರಸುಗಳನ್ನು ಜಾರಿಗೊಳಿಸಬೇಕಾದರೆ ಅದು ದ್ವಿಪಕ್ಷೀಯ ತೀರ್ಮಾನವಾಗಬೇಕು. ಈ ದ್ವಿಪಕ್ಷಗಳೆಂದರೆ ಸರ್ಕಾರ ಮತ್ತು ಬ್ಯಾಂಕುಗಳ ಆಡಳಿತವನ್ನು ಪ್ರತಿನಿಧಿಸುವ ಇಂಡಿಯನ್ ಬ್ಯಾಂಕ್ ಅಸೋಸಿಯೇಶನ್ ಮತ್ತು ಬ್ಯಾಂಕ್ ನೌಕರರ/ಅಧಿಕಾರಿಗಳ ಸಂಘಟನೆಗಳು.

ಮೊದಲನೆ ವರ್ಗದ ಶಿಫಾರಸುಗಳನ್ನು ಬ್ಯಾಂಕುಗಳು ಸುಲಭವಾಗಿ ಜಾರಿಗೊಳಿಸಬಹುದು. ಆದರೆ ಮುಗ್ಗಟ್ಟು ಬರುವುದು ಎರಡನೆ ವಿಭಾಗದ ಜಾರಿಯಲ್ಲಿ. ಮಹಾತ್ಮ ಗಾಂಧಿಯಿಂದ ಹಿಡಿದು ಗೊಯ್‌ಪೊರಿಯಾ ತನಕ ಎಲ್ಲರೂ ಗ್ರಾಹಕ ಸೇವೆಯ ಮಹತ್ವವನ್ನು ತತ್ವಶಃ ಒಪ್ಪುವವರೇ—ಆದರೆ ಆ ಸೇವೆ ಕಾರ್ಯರೂಪಕ್ಕೆ ತರಬೇಕಾದರೆ ನಾಣ್ಯದ ಇನ್ನೊಂದು ಮುಖ ಗೋಚರಿಸುತ್ತದೆ. ರಾಷ್ಟ್ರೀಕರಣವಾದ ಮೇಲೆ ಬ್ಯಾಂಕಿಂಗ್ ಉದ್ಯಮ ಬೆಳೆದ ರೀತಿಯಲ್ಲೇ ಅಲ್ಲಿಯ ಗ್ರಾಹಕಸೇವೆ ಬೆಳೆಯುತ್ತಿಲ್ಲ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಅದಕ್ಕೆ ಅನೇಕ ಕಾರಣವೂ ಇಲ್ಲದಿಲ್ಲ. ಮುಖ್ಯ ಕಾರಣ ಎಂದರೆ ಎಲ್ಲ ಪ್ರಕಾರಗಳಲ್ಲಿ ಬೆಳೆಯುತ್ತಿರುವ ಅಗಾಧವಾದ ವಹಿವಾಟುಗಳು, ಸರ್ಕಾರದ ಸಾಮಾಜಿಕ ಕಲ್ಯಾಣ ಯೋಜನೆಗಳು, ಬ್ಯಾಂಕುಗಳ ನಡುವಣ ಸ್ಪರ್ಧೆ ಮತ್ತು ಸುಸಂಘಟಿತವಾದ ಬ್ಯಾಂಕ್ ಕಾರ್ಮಿಕ ಸಂಘಗಳು. ಗ್ರಾಹಕಸೇವೆಯ ಹೆಸರಿನಲ್ಲಿ ಯಾವುದೇ ಹೊಸ ಕಾರ್ಯಕ್ರಮ ಸಿಬ್ಬಂದಿಯ ಹಿತಕ್ಕೆ ಸ್ವಲ್ಪ ವಿರೋಧವಾಗಿದ್ದರೂ ಸಹ ಅದನ್ನು ಕಾರ್ಯಗತಗೊಳಿಸಲು ಸಂಘಗಳು ಬಿಡುವುದಿಲ್ಲ. ಸರ್ಕಾರದ ಇತ್ತೀಚಿನ ಕೈಗಾರಿಕಾ ನೀತಿಯನ್ನು ಬ್ಯಾಂಕ್ ನೌಕರರು ಈಗಾಗಲೇ ವಿರೋಧಿಸಿದ್ದಾರೆ. ನರಸಿಂಹಮ್ ಸಮಿತಿಯ ಕೆಲವು ಶಿಫಾರಸುಗಳನ್ನು ಸಹ ವಿರೋಧಿಸಿದ್ದಾರೆ. ನರಸಿಂಹಮ್ ಸಮಿತಿಯ ಕೆಲವು ಶಿಫಾರಸುಗಳು ಬ್ಯಾಂಕಿಂಗ್ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸುವ ಸಾಧ್ಯತೆಗಳಿವೆ.

ಖಾಸಗಿ ವಲಯದ ಮತ್ತು ವಿದೇಶಿ ಬ್ಯಾಂಕುಗಳು ಹೆಚ್ಚು ಶಾಖೆಗಳನ್ನು ತೆರೆಯಲು ಅನುವು ಮಾಡಿದೆ. ಗ್ರಾಹಕ ಸೇವೆಯಲ್ಲಿ ಈ ಬ್ಯಾಂಕುಗಳು ಎಲ್ಲಾ ರೀತಿಯಲ್ಲೂ ಮುಂದೋಡಿ ಇತರೆ ಬ್ಯಾಂಕುಗಳಿಗೆ ಸವಾಲೊಡ್ಡುವುದು ಸಂಶಯವಿಲ್ಲ. ಈ ಹಿನ್ನೆಲೆಯಲ್ಲಿ ಗೊಯ್‌ಪೋರಿಯಾ ಸಮಿತಿಯ ಸಲಹೆಗಳನ್ನು ತ್ವರಿತವಾಗಿ ಅನುಷ್ಠಾನಕ್ಕೆ ತರುವುದು ಸಾಧ್ಯವೆ ? ಕಳೆದ 15 ವರ್ಷಗಳ ಪ್ರಯತ್ನದಿಂದ ಗಣಕೀಕರಣವನ್ನು ಬ್ಯಾಂಕಿನ ಮೊದಲ ಮಟ್ಟದಲ್ಲಿ ಸಹ ತರಲಾಗಿಲ್ಲ. ಇನ್ನು ಸಮಿತಿಯ ಸಲಹೆಯಂತೆ ನಗರ/ಅರೆನಗರ ಪ್ರದೇಶಕ್ಕೆ ಗಣಕೀಕರಣ ವಿಸ್ತಾರ ಹೇಗೆ ಸಾಧ್ಯ?

ಇನ್ನು ಸಿಬ್ಬಂದಿ ವರ್ಗಕ್ಕೆ ಹೆಚ್ಚು ಕೆಲಸ ಮತ್ತು ಜವಾಬ್ದಾರಿ ವಹಿಸುವ ಸಲಹೆಯನ್ನು ನೌಕರರು ಒಪ್ಪುವರೆ ? ಸರ್ಕಾರ ಮತ್ತು ಬ್ಯಾಂಕ್ ನೌಕರರ ನಡುವೆ ಕೈಗಾರಿಕಾ ನೀತಿ, ನರಸಿಂಹಮ್ ಸಮಿತಿ ವರದಿ ಬಗ್ಗೆ ಈಗಾಗಲೇ ಸಂಘರ್ಷ ನಡೆದಿದ್ದು ಇತ್ತೀಚಿನ ಹರ್ಷದ್ ಮೆಹತಾ ಷೇರು ಹಗರಣ. ಬ್ಯಾಂಕಿಂಗ್ ಕ್ಷೇತ್ರದ ಎಲ್ಲ ವಾತಾವರಣವನ್ನು ಕಲುಷಿತಗೊಳಿಸಿದೆ. ಈ ಪರಿಸ್ಥಿತಿಯಲ್ಲಿ ಗೋಯ್‌ಪೊರಿಯಾ ಸಮಿತಿಯ ಕೆಲವು ಸಲಹೆಗಳನ್ನು ಜಾರಿಗೊಳಿಸುವುದು ಸರ್ಕಾರಕ್ಕೆ ಕಷ್ಟಸಾಧ್ಯ. ಆದರೆ ಒಂದು ಆಶಾಕಿರಣವೆಂದರೆ ಸ್ಪರ್ಧಾತ್ಮಕ ಕ್ಷೇತ್ರಗಳಲ್ಲಿ ಹೊಸ ಹೊಸ ಪ್ರಯೋಗಗಳು ಸಹಜ ಎನ್ನುವುದನ್ನು ಬ್ಯಾಂಕ್ ನೌಕರರು ಒಲ್ಲದ ಮನಸ್ಸಿನಿಂದ ಒಪ್ಪುತ್ತಿದ್ದಾರೆ. ಬಹುಶಃ ಈ ದೆಸೆಯಲ್ಲಿ ನೌಕರರನ್ನು ಒಲಿಸಲು

[ಪುಟ 9ಕ್ಕೆ

# ಗೋಯಿಯ್‌ಪೋರಿಯಾ ಸಮಿತಿಯ ಸಲಹೆಗಳು

# 'ಉತ್ತಮ ಗ್ರಾಹಕಸೇವೆ'

**ಉತ್ತಮ ಗ್ರಾಹಕಸೇವೆ ಕುರಿತಂತೆ ಎಂ. ಎನ್. ಗೋಯಿಯ್‌ಪೋರಿಯಾ ಸಮಿತಿಯ ವರದಿಯನ್ನು ಕುರಿತ ವಿವೇಚನೆ ಹಿಂದಿನ ಲೇಖನದಲ್ಲಿದೆ. ಆ ಸಮಿತಿಯ ಸಲಹೆಗಳನ್ನೇ ಪಟ್ಟಿಮಾಡಿ ಇಲ್ಲಿ ಕೊಡಲಾಗಿದೆ.**

ಅನುವಾದ :
**ರಾಮಸ್ವಾಮಿ ಕಳಸವಳ್ಳಿ**
**ಸ್ಟೇಟ್ ಬ್ಯಾಂಕ್ ಆಫ್ ಮೈಸೂರು**
**ಜೋಗ್ ಫಾಲ್ಸ್–577 435**
**ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ**

ಭಾರತೀಯ ಬ್ಯಾಂಕುಗಳಲ್ಲಿ ಗ್ರಾಹಕ ಸೇವೆ ಉತ್ತಮವಾಗಿಲ್ಲ ಎಂಬ ದೂರುಗಳು ಎಲ್ಲೆಡೆಯಿಂದ ಕೇಳಿಬರುತ್ತಿವೆ. ಸೇವೆಯನ್ನು ಉತ್ತಮಪಡಿಸ ಬೇಕೆಂಬ ಉದ್ದೇಶದಿಂದ ಭಾರತೀಯ ಸ್ಟೇಟ್ ಬ್ಯಾಂಕ್‌ನ ಅಧ್ಯಕ್ಷ ಎಂ. ಎನ್. ಗೋಯಿಯ್‌ಪೋರಿಯ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿ, ಬ್ಯಾಂಕುಗಳಲ್ಲಿ ಉತ್ತಮ ಗ್ರಾಹಕ ಸೇವೆಗಾಗಿ ಸಲಹೆ ನೀಡಲು ಸೂಚಿಸಲಾಯಿತು.

ಸಮಿತಿ ಸಲ್ಲಿಸಿದ ಕೆಲವು ಮುಖ್ಯ ಸಲಹೆಗಳನ್ನು ಈ ರೀತಿ ಪಟ್ಟಿ ಮಾಡಬಹುದು :

ವ್ಯವಹಾರದ ವೇಳೆ ಆರಂಭವಾಗುವ 15 ನಿಮಿಷಗಳ ಮುನ್ನ ಸಿಬ್ಬಂದಿಯವರ ಕೆಲಸದ ವೇಳೆ ಆರಂಭವಾಗಬೇಕು. ಇದು ನಗರ ಮತ್ತು ಪಟ್ಟಣದ ಶಾಖೆಗಳಿಗೆ ಸೀಮಿತಗೊಂಡಂತೆ.

ವ್ಯವಹಾರದ ವೇಳೆ ಮುಗಿಯುವ ಮುನ್ನ ಬ್ಯಾಂಕ್ ಆವರಣವನ್ನು ಪ್ರವೇಶಿಸಿದ ಎಲ್ಲಾ ಗ್ರಾಹಕರಿಗೂ ಸೇವೆ ಲಭ್ಯವಿರಬೇಕು.

ವ್ಯವಹಾರದ ವೇಳೆಯನ್ನು ನಗದು ವಿಭಾಗ ಹೊರತುಪಡಿಸಿ ಕೆಲಸದ ವೇಳೆ ಮುಗಿಯುವ ಒಂದು ಗಂಟೆಯ ಮೊದಲಿನವರೆಗೂ ವಿಸ್ತರಿಸಬೇಕು.

ವ್ಯವಹಾರದ ವೇಳೆಯಲ್ಲಿ ಎಲ್ಲಾ ಮುಂಗಟ್ಟೆಗಳೂ ಗ್ರಾಹಕರಿಗಾಗಿ ತೆರೆದಿರಬೇಕು ಮತ್ತು ಗ್ರಾಹಕರ ವ್ಯವಹಾರಕ್ಕೆ ಭಂಗಬಾರದಂತಿರಬೇಕು.

ಎಲ್ಲಾ ಶಾಖೆಗಳು, ಕೆಲವು ಅತಿ ಸಣ್ಣ ಶಾಖೆಗಳನ್ನು ಹೊರತುಪಡಿಸಿ ಶಾಖಾ ಪ್ರವೇಶದ್ವಾರಕ್ಕೆ ಸನಿಹದಲ್ಲಿ 'ವಿಚಾರಣೆ' ಅಥವಾ 'ನಾನು ನಿಮಗೆ ಸಹಾಯ ಮಾಡಲೇ' ಮುಂಗಟ್ಟೆ ಹೊಂದಿರಬೇಕು ಈ ಮುಂಗಟ್ಟೆ ಪ್ರತ್ಯೇಕವಾಗಿಯಾಗಲಿ ಇನ್ನಾವುದೇ ಮುಂಗಟ್ಟೆಗಳು ಒಟ್ಟುಗೂಡಿಯಾಗಲಿ ಇರಬಹುದು.

ಡ್ರಾಫ್ಟ್ ನೀಡುವಲ್ಲಿ, ಚಿಕ್ಕ ಮೊತ್ತದ ನೋಟುಗಳನ್ನು ಸ್ವೀಕರಿಸಲು ತೊಂದರೆಯಾದಲ್ಲಿ ಬ್ಯಾಂಕಿನ ಅಧಿಕಾರಿ ವರ್ಗದವರು ಅಥವಾ ಮೇಲಧಿಕಾರಿಗಳು ಮತ್ತು ಭಾರತೀಯ ರಿಸರ್ವ್ ಬ್ಯಾಂಕ್ ಗ್ರಾಹಕರನ್ನು ವಿಶ್ವಾಸಕ್ಕೆ ತೆಗೆದುಕೊಂಡು ವ್ಯವಹರಿಸಬೇಕು.

ಬ್ಯಾಂಕ್ ಶಾಖೆಗಳ ಮತ್ತು ಚಲಾರ್ಥ ಕೋಠಿಗಳ ಹಣ ನಿರ್ವಹಣೆಯನ್ನು ಭಾರತೀಯ ರಿಸರ್ವ್ ಬ್ಯಾಂಕ್ ತನ್ನ ಚುರುಕು ನಿರ್ವಹಣಾ ವಿಧಾನದಿಂದ ಅಧಿಕ ಮತ್ತು ಕಡಿಮೆಯ ಚಲಾರ್ಥ ಕೋಠಿಯ ವ್ಯತ್ಯಾಸವನ್ನು ಸರಿದೂಗಿಸಬೇಕು.

ಭಾರತೀಯ ಚಲಾರ್ಥ ಸಂಸ್ಥೆ (ಕರನ್ಸಿ ಕಾರ್ಪೋರೇಷನ್ ಆಫ್ ಇಂಡಿಯಾ) ಸ್ಥಾಪನೆಯಾಗಬೇಕು.

ಹರಿದ ಮತ್ತು ಹಾಳಾದ ನೋಟುಗಳ ವಿನಿಮಯಕ್ಕಾಗಿ ಸಿಬ್ಬಂದಿಗೆ ಹೆಚ್ಚಿನ ತರಬೇತಿ ಕೊಟ್ಟು ಸುಲಭವಾಗಿ ವಿನಿಮಯ ಮಾಡಿಕೊಡಬೇಕಲ್ಲದೆ, ನೋಟು ವಾಪಸಾತಿ ನಿಯಮವನ್ನು ಸಡಿಲಗೊಳಿಸಬೇಕು.

ಆವಶ್ಯಕತೆಯಿದ್ದಲ್ಲಿ ನೋಟು ಹಣವನ್ನು ಎಣಿಕೆ ಮಾಡುವ ಯಂತ್ರವನ್ನು ಹೊರತರಬೇಕು.

ನಾಮ ನಿರ್ದೇಶನಕ್ಕೆ ತೆಗೆದುಕೊಳ್ಳುವ ಅರ್ಜಿ ನಮೂನೆಗೆ ಬದಲಾಗಿ, ಖಾತೆ ತೆರೆಯುವ ಅರ್ಜಿ ನಮೂನೆಯಲ್ಲಿ ನಾಮ ನಿರ್ದೇಶನಕ್ಕೆ ಹೆಸರು, ವಿಳಾಸ, ಸೂಚಿಸಲು ಅಂಕಣವನ್ನು ಒದಗಿಸಬೇಕು. ಗ್ರಾಹಕರ ಸುಲಭ ತಿಳಿವಳಿಕೆಗಾಗಿ ನಾಮ ನಿರ್ದೇಶನ ಸೌಲಭ್ಯದ ಬಗ್ಗೆ ಚೆಕ್ ಪುಸ್ತಕ, ಪಾಸ್ ಪುಸ್ತಕಗಳಲ್ಲಿ ಆ ಬಗ್ಗೆ ಜಾಹಿರಾತುಗಳನ್ನು ಅಚ್ಚು ಮಾಡಬಹುದು. ಗ್ರಾಹಕರು ಆ ಬಗ್ಗೆ ಪೂರ್ಣ ಮಾಹಿತಿಯನ್ನು ಪಡೆಯುವ ಯಾವುದೇ ಮಾಧ್ಯಮವನ್ನಾದರೂ ಇದಕ್ಕೆ ಬಳಸಿಕೊಳ್ಳಬಹುದು.

ನಾಮ ನಿರ್ದೇಶನದ ಆವಶ್ಯಕತೆಯಲ್ಲಿ ಎಂದೂ ನಿರ್ದಿಷ್ಟವಾಗಿ ಸೂಚಿಸದ ಹೊರತು ಎಲ್ಲರಿಗೂ ಹಾಲಿ ಹೊಂದಿರುವ ಮತ್ತು ಹೊಸ ಎಲ್ಲಾ ಖಾತೆಗಳಿಗೂ ನಾಮ ನಿರ್ದೇಶನವನ್ನು ಕಡ್ಡಾಯಗೊಳಿಸಬೇಕು.

ಈ ನಾಮ ನಿರ್ದೇಶನ ಸೌಲಭ್ಯವನ್ನು ಸುಭದ್ರ ಕಪಾಟುಗಳಿಗೂ ಅನ್ವಯಿಸುವಂತೆ ಪ್ರಚುರಪಡಿಸಬೇಕು.

ಖಾತೆ ತಃಖ್ತೆ ಮತ್ತು ಪಾಸ್ ಪುಸ್ತಕಗಳ ನಮೂದುಗಳುತಪ್ಪಿಲ್ಲದಂತೆಯೂ ಓದುವಂತೆಯೂ ಇರಬೇಕು.

ಗ್ರಾಹಕ ಪ್ರತಿ ಬಾರಿಯೂ ಬ್ಯಾಂಕಿಗೆ ತನ್ನ ಪಾಸ್ ಪುಸ್ತಕವನ್ನು ತಂದು ನಮೂದಿಗಾಗಿ ಕೊಡಬೇಕು. ಆ ನಿಟ್ಟಿನಲ್ಲಿ ಗ್ರಾಹಕರನ್ನು ಜಾಗೃತಗೊಳಿಸಬೇಕು. ಅಲ್ಲದೇ ಹೆಚ್ಚು ನಮೂದುಗಳಿದ್ದಲ್ಲಿ ಪಾಸ್ ಪುಸ್ತಕವನ್ನು ಶಾಖೆಯಲ್ಲಿ ಉಳಿಸಿಕೊಂಡರೆ ಅದಕ್ಕೆ ಪ್ರತಿಯಾಗಿ ಕಾಗದದ ಬಿಲ್ಲೆಯೊಂದನ್ನು ನೀಡಬೇಕು.

ಅವಧಿ ಮುಗಿದ ಠೇವಣಿಗಳ ಸರಿಯಾದ ವಿಲೇವಾರಿಗಾಗಿ ಗ್ರಾಹಕನಿಂದ ಮುಂಗಡ-ಸ್ಥಾಯೀ ಸೂಚನೆಯನ್ನು ಪಡೆಯುವ ವ್ಯವಸ್ಥೆಯನ್ನಾಗಲಿ ಸ್ಥಾಯೀ ಸೂಚನೆ ಇಲ್ಲದಿದ್ದರೆ ಠೇವಣಿ ಅವಧಿ ಮುಗಿದ ಬಗ್ಗೆ ಕಡ್ಡಾಯವಾಗಿ ಗ್ರಾಹಕನಿಗೆ ಸೂಚನಾ ಪತ್ರವನ್ನು ಕಳುಹಿಸುವ ನಿಯಮವನ್ನಾಗಲಿ ಜಾರಿಗೆ ತರಬೇಕು.

ಬ್ಯಾಂಕುಗಳು ರೂ. 5,000ದ ಘಟಕಗಳಲ್ಲಿ

---

## ಗ್ರಾಹಕ ಸೇವೆಯತ್ತ ಮತ್ತೊಂದು ಹೆಜ್ಜೆ

[ಪುಟ 8ರಿಂದ ಮುಂದುವರಿದುದು]

ಸರ್ಕಾರ ನೇರ ಮಾತುಕತೆ ಮತ್ತು ಸ್ವಲ್ಪ ಕೊಡು-ಕೊಳ್ಳುವಿಕೆ ವಿಧಾನವನ್ನು ಸಧ್ಯದಲ್ಲೇ ಬರಲಿರುವ ವೇತನ-ಪರಿಷ್ಕರಣದ ಸಂಧಾನದಲ್ಲಿ ಅನುಸರಿಸಬಹುದು.

ಬ್ಯಾಂಕಿಂಗ್ ಕ್ಷೇತ್ರದ ಸಂದಿಗ್ಧ ಪರಿಸ್ಥಿತಿಯಲ್ಲಿ 'ಸಮಿತಿ'ಯ ವರದಿ ಬಂದಿದೆ. ಅನೇಕ ಹೊರ ರಾಷ್ಟ್ರಗಳಲ್ಲಿ ಖಾಸಗೀಕರಣದತ್ತ ತಿರುವು, ಭಾರತದಲ್ಲೂ ಬದಲಾವಣೆಯ ಗಾಳಿ, ಕಳೆದ 40 ವರ್ಷಗಳಿಂದಲೂ ಸಾರ್ವಜನಿಕ ಕ್ಷೇತ್ರದಲ್ಲಿ ನಂಬಿಕೆ ಇಟ್ಟಿದ್ದ ಕಾಂಗ್ರೆಸ್ ಪಕ್ಷಕ್ಕೆ ಸಹ ಕಹಿ ಅನುಭವ. ನರಸಿಂಹಮ್ ಮತ್ತು ಜಾನಕೀರಾಮನ್ ಸಮಿತಿಯ ವರದಿಗಳು, ಬ್ಯಾಂಕ್ ನೌಕರರ ನರಸಿಂಹಾವತಾರ, ಹರ್ಷದ್ ಹಗರಣ, ಈ ಎಲ್ಲ ಗೊಂದಲಮಯ ವೃತ್ತದ ಕೇಂದ್ರಬಿಂದುವಾಗಿ ಗ್ರಾಹಕ ಚಾತಕಪಕ್ಷಿಯಂತೆ ನಿಂತಿದ್ದಾನೆ. ಅವನ ನಿರೀಕ್ಷೆ ಎಷ್ಟು ಈಡೇರುತ್ತದೆ ಎಂದು ಕಾದು ನೋಡೋಣ.

●

ಅಥವಾ ಅದರ ಗುಣಕಗಳಲ್ಲಿ ಕಾಲಾವಧಿ ಠೇವಣಿಯನ್ನು ಸ್ವೀಕರಿಸಿ ಅದಕ್ಕೆ ಈಗಿನ ರಸೀತಿಯ ಬದಲಾಗಿ ಪಾಸ್ ಪುಸ್ತಕವನ್ನು ನೀಡುವುದನ್ನು ಜಾರಿಗೆ ತರಬೇಕು.

ಬದಲಾದ ಠೇವಣಿಯ ಮೇಲಿನ ಬಡ್ಡಿದರವನ್ನು ಹಾಲಿ ಇರುವ ಠೇವಣಿಗಳಿಗೂ ಅನ್ವಯಿಸುವಂತೆ ಜಾರಿಗೆ ತರಬೇಕು.

ಬದಲಾದ ಠೇವಣಿಗಳ ಮೇಲಿನ ಬಡ್ಡಿದರಗಳನ್ನು ಜಾರಿಗೊಳಿಸಲು ಗ್ರಾಹಕರ ಮತ್ತು ಬ್ಯಾಂಕಿಗೆ ತಿಳಿಯುವಂತಹ ಸುದ್ದಿ ಮಾಧ್ಯಮಗಳ ಆಧಾರದ ಮೇಲೆ ಠೇವಣಿಯನ್ನು ಸ್ವೀಕರಿಸಬೇಕು.

ಬ್ಯಾಂಕಿನಲ್ಲಿ ತೊಡಗಿಸಿದ ಠೇವಣಿಗಳ ಮೇಲೆ ತೆರಿಗೆ ವಿನಾಯಿತಿ ಸೌಲಭ್ಯ ಒದಗಿಸಬೇಕು.

ರೂ. 5,000 ವರೆಗಿನ ಡ್ರಾಫ್ಟ್‌ಗಳು ಮೊದಲೇ ಅಧಿಕೃತ ಸಹಿ ಹೊಂದಿದ್ದು, ಅನಂತರ ಮತ್ತೊಬ್ಬ ಅಧಿಕೃತ ಸಿಬ್ಬಂದಿಯಿಂದ ಸಹಿ ಹಾಕಿಸುವ ಏಕ ಗವಾಕ್ಷಿ ಕಲ್ಪನೆಯನ್ನು ಜಾರಿಗೊಳಿಸಬೇಕು.

ಈ ಸೌಲಭ್ಯವನ್ನು ಬ್ಯಾಂಕರ ಚೆಕ್ಕು, ಪಾವತಿ ಆದೇಶಕ್ಕೂ ಅನ್ವಯಿಸುವಂತೆ ಬಳಕೆಗೆ ತರಬೇಕು.

ಪೋಸ್ಟಲ್ ಆರ್ಡರ್‌ನಂತೆ ಬ್ಯಾಂಕ್ ಆದೇಶವನ್ನು ರೂ. 5, ರೂ. 20, ರೂ. 100, ರೂ. 500, ರೂ.1,000ಕ್ಕೆ ಪ್ರಾರಂಭಿಸಿ ಖರೀದಿದಾರನು ಪ್ರಾಪ್ತಿಕರ್ತನ ಹೆಸರನ್ನು ತುಂಬಲು ಅವಕಾಶ ವಿರಬೇಕು.

ಹೊರ ಕೇಂದ್ರದ ಚೆಕ್ಕುಗಳನ್ನು ಕೂಡಲೇ ಪ್ರಾಪ್ತಿಕರ್ತನ ಖಾತೆಗೆ ಜಮಾ ಮಾಡಲು ಈಗಿರುವ ಮೊತ್ತ ರೂ. 2,500ರಿಂದ ರೂ. 5,000ಕ್ಕೆ ಹೆಚ್ಚಿಸಬೇಕು. ಅದಕ್ಕೆ ವಿಶೇಷವಾದ ಚಲನನ್ನು ತಯಾರಿಸಬೇಕು.

ಹೊರ ಕೇಂದ್ರದ ಚೆಕ್ಕುಗಳ ಮೊತ್ತವನ್ನು ಖಾತೆಗೆ ಜಮಾ ಮಾಡಲು ಹೆಚ್ಚಿನ ದಿನಗಳನ್ನು ತೆಗೆದುಕೊಂಡಲ್ಲಿ ಆ ಹೆಚ್ಚಿನ ದಿನಗಳಿಗೆ ಶೇಕಡ 2 ಸಾಲಿಯಾನ ಉಳಿತಾಯ ಖಾತೆ ಬಡ್ಡಿಗಿಂತ ಹೆಚ್ಚು ನೀಡಬೇಕು. ಅಂತಹ ಮೊತ್ತ ರೂ. 5 ಮತ್ತು ಅದಕ್ಕಿಂತ ಹೆಚ್ಚಾದಲ್ಲಿ ಮಾತ್ರ.

ಅನಾದರಣೆಯಾದ ಸಂದೇಶಗಳನ್ನು 24 ಘಂಟೆಯೊಳಗಾಗಿ ಗ್ರಾಹಕನಿಗೆ ಹಿಂದಿರುಗಿಸಬೇಕು ಅಥವಾ ಅಂಚೆಗೆ ಹಾಕಬೇಕು.

ಅಂಚೆ ವರ್ಗಾವಣೆಯ ಮೊತ್ತವನ್ನು ಖಾತೆಗೆ ಪಾವತಿಸುವಲ್ಲಿ 8 ದಿನಗಳಿಗಿಂತ ಹೆಚ್ಚು ವಿಳಂಬವಾದಲ್ಲಿ ಅದಕ್ಕೆ ಉಳಿತಾಯ ಖಾತೆಯ ಬಡ್ಡಿಯ ಮೇಲ್ಪಟ್ಟು ಶೇ. 2 ಅಧಿಕ ಬಡ್ಡಿಯನ್ನು ಕೊಡಬೇಕು. ಅಂತಹ ಬಡ್ಡಿಯ ಮೊತ್ತ ರೂ. 5 ಮತ್ತು ಅದಕ್ಕಿಂತ ಹೆಚ್ಚಿದ್ದಲ್ಲಿ ಅನ್ವಯಿಸುವಂತೆ.

ಮೇಲಧಿಕಾರಿ ವರ್ಗದವರು ಸರಿಯಾದ ತಿಳುವಳಿಕೆ ಕೊಡುವ ಮೂಲಕ ಅಧಿಕಾರಿಗಳು ತಮ್ಮ ಹಕ್ಕು ಚಲಾಯಿಸಲು ಅಥವಾ ಉಪಯೋಗಿಸಲು ಇರುವ ಅಂಜಿಕೆಯನ್ನು ಹೋಗಲಾಡಿಸಬೇಕು.

ಸಾಲಗಾರರ ಅನುಕೂಲಕ್ಕಾಗಿ ಎಲ್ಲಾ ಸಾಲಗಳ ವಿಷಯದಲ್ಲಿ ಸಂಕ್ಷಿಪ್ತ ಹಾಗೂ ವರ್ತಮಾನದವರೆಗಿನ ನಿಯಮಾವಳಿಗಳು ಶಾಖಾಧಿಕಾರಿಗಳಿಗೆ ದೊರೆಯುವಂತ ವ್ಯವಸ್ಥೆ ಹೊಂದಿರಬೇಕು.

ಸರ್ಕಾರ ಹೊಸ ಸಾಲ ಯೋಜನೆಗಳನ್ನು ರೂಪಿಸುವ ಮೊದಲು, ಭಾರತೀಯ ರಿಸರ್ವ್ ಬ್ಯಾಂಕ್ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್, ಮತ್ತು ಭಾರತೀಯ ಬ್ಯಾಂಕುಗಳ ಒಕ್ಕೂಟದೊಡನೆ ಚರ್ಚಿಸಿ ಅದು ಸುಲಭವಾಗಿ ಯಶಸ್ವಿಗೊಳಿಸುವಲ್ಲಿ ಶ್ರಮಿಸಬೇಕು.

ಪ್ರತಿಯೊಬ್ಬ ಸಿಬ್ಬಂದಿಯೂ ಹೆಸರು ಮತ್ತು ಭಾವಚಿತ್ರಗಳನ್ನೊಳಗೊಂಡ ಗುರುತು ಚೀಟಿಯನ್ನು ಧರಿಸಬೇಕು.

ಗುಮಾಸ್ತ ಸಿಬ್ಬಂದಿಗೆ ಕಾಲಕಾಲಕ್ಕೆ ಅವರ 'ಕೆಲಸದ ಜಾಗದಲ್ಲಿ' ಬದಲಾವಣೆ ಮಾಡಬೇಕು ಮತ್ತು ಪ್ರಾಥಮಿಕ ಮೇಲ್ವಿಚಾರಣಾ ಕೆಲಸದಲ್ಲಿ ತೊಡಗಿಸಬೇಕು.

ಸಿಬ್ಬಂದಿಗೆ ಕೊಡುವ ತರಬೇತಿಗಳೆಲ್ಲಾ ಗ್ರಾಹಕ ಸೇವೆಯ ಅನುಷ್ಠಾನಕ್ಕೆ ದಾರಿಯಾಗಿರಬೇಕು.

ಹೊಸದಾಗಿ ನೇಮಕಗೊಂಡ ಎಲ್ಲಾ ಸಿಬ್ಬಂದಿ ಮತ್ತು ಅಧಿಕಾರಿ ವರ್ಗದವರಿಗಾಗಿ ಪ್ರಾಥಮಿಕ ತರಬೇತಿ ಕಾರ್ಯಕ್ರಮ ಕಡ್ಡಾಯವಾಗಿ ನಡೆಸಬೇಕು.

ರಾಷ್ಟ್ರೀಯ ಬ್ಯಾಂಕ್ ವ್ಯವಸ್ಥಾಪನ ಸಂಸ್ಥೆ ಕೊಡುವ ತರಬೇತಿ ಕಾರ್ಯಕ್ರಮ ಬ್ಯಾಂಕಿನ ಅಗತ್ಯಕ್ಕೆ ಪೂರಕವಾಗಿ ಸಂಯೋಜಿತವಾಗಿದ್ದು, ಬೋಧಕರು ಪ್ರಾಯೋಗಿಕ ಬ್ಯಾಂಕಿಂಗ್ ಬಗ್ಗೆ ರಾಷ್ಟ್ರೀಯ ಬ್ಯಾಂಕ್ ವ್ಯವಸ್ಥಾಪನ ಸಂಸ್ಥೆಯ ಆಶ್ರಯದಲ್ಲಿ ಚಿಕ್ಕ ಶಿಬಿರಗಳನ್ನು ಹಮ್ಮಿಕೊಳ್ಳಬೇಕು.

ಯೋಗ್ಯ ತರಬೇತಿಗಾಗಿ ಬೋಧಕ ವರ್ಗ ಮತ್ತು ಅವರ ಮುಖ್ಯಸ್ಥರ ಆಯ್ಕೆಯ ಬಗ್ಗೆ ತರಬೇತಿ ಸಂಸ್ಥೆಗಳು ಹೆಚ್ಚಿನ ಗಮನ ನೀಡಬೇಕು.

ಸಿಬ್ಬಂದಿಯವರು ತೆಗೆದುಕೊಳ್ಳುವ ಒಳ್ಳೆಯ ವಿಶ್ವಾಸದ ನಿರ್ಧಾರಗಳನ್ನು ನಿಯಂತ್ರಣ ಕಛೇರಿಗಳವರು ಸೂಕ್ತವಾದ ರೀತಿಯಲ್ಲಿ ಗುರುತಿಸಬೇಕು. ಸ್ತರದ ಅಧಿಕಾರಿಗಳನ್ನು ಕೇಂದ್ರೀಯ ಜಾಗೃತ ಆಯೋಗದ ನಿಯಮಗಳ ವ್ಯಾಪ್ತಿಯಿಂದಾಚೆ ಇಟ್ಟು ಬ್ಯಾಂಕಿನ ಒಳಾಡಳಿತದಲ್ಲಿ ಜಾಗೃತದಳಗಳು ಸಹಕರಿಸಬೇಕು. ಈ ಕೇಂದ್ರೀಯ ಜಾಗೃತ ಆಯೋಗದವರು ಬ್ಯಾಂಕುಗಳ ಕಾರ್ಯವೈಖರಿಯನ್ನು ತಿಳಿದಿರುವ ಅರ್ಹ ಅಧಿಕಾರಿಗಳನ್ನು ಬ್ಯಾಂಕಿಗೆ ಪ್ರತಿನಿಯುಕ್ತಿ ಮಾಡಬೇಕು.

ಉತ್ತಮ ಗ್ರಾಹಕ ಸೇವೆ ನೀಡುವಲ್ಲಿ ನೌಕರರ ಸಂಘ ಮತ್ತು ಅಧಿಕಾರಿಗಳ ಒಕ್ಕೂಟಗಳ ಚೇತನವನ್ನು ಬಳಸಿಕೊಳ್ಳಬೇಕು.

ನೌಕರ ಸಂಘದ ಒಪ್ಪಿಗೆಯೊಡನೆ ಕೇಂದ್ರ ಮತ್ತು ನಗರ ಪ್ರದೇಶಗಳಲ್ಲಿ ಹೆಚ್ಚಿನ ಸ್ವಯಂ ಚಾಲಿತ ಮತ್ತು ನವೀನ ಮಾದರಿಯ ಯಂತ್ರೋಪಕರಣಗಳ ಕಾರ್ಯವಿಧಾನವನ್ನು ಜಾರಿಗೆ ತರಬೇಕು.

ಗ್ರಾಹಕರ ವ್ಯವಹಾರದಲ್ಲಿ ನಿರ್ದಿಷ್ಟವಾಗಿ ಹಣ ವರ್ಗಾವಣೆಯಂತಹ ವಿಚಾರದಲ್ಲಿ ಬ್ಯಾಂಕ್ ಜಾಲ: ವಿಶ್ವವ್ಯಾಪಿ ಅಂತರಬ್ಯಾಂಕ್ ಹಣಕಾಸು ಟೆಲಿ ಸಂಪರ್ಕ ಸಂಘ, ದೂರ ಕ್ಷೇತ್ರ ವ್ಯವಹಾರ ಸಂದೇಶ ಜಾಲಗಳನ್ನು ಉಪಯೋಗಿಸಬೇಕು.

ದೂರ ಸಲಹೆ ಪುಸ್ತಕದಲ್ಲಿ ಬರೆದದ್ದು ತಕ್ಷಣವೇ ಅದರ ಒಂದು ಪ್ರತಿ ಗ್ರಾಹಕನಿಗೆ ದೊರೆಯುವಂತೆ (ಕೀಳುವ ಪ್ರತಿ) ವ್ಯವಸ್ಥೆ ಮಾಡಿ ಆ ಬಗ್ಗೆ ನಿಯಂತ್ರಣ ಕಛೇರಿಗೆ ಸುದ್ದಿ ಕಳುಹಿಸಬೇಕು.

ಸರ್ಕಾರಿ ರೀತಿಯಲ್ಲಿ ನಿರ್ಬಂಧಿತ ರಜೆಯನ್ನು ಜಾರಿಗೆ ತಂದು ಕೆಲಸದ ದಿನಗಳನ್ನು ಹೆಚ್ಚಿಸಬೇಕು. ವರ್ಷದಲ್ಲಿನ ಸಾರ್ವಜನಿಕ ರಜಾದಿನಗಳನ್ನು 15 ದಿನಗಳಿಗೆ ಮೀರದಂತೆ ಮಿತಿಗೊಳಿಸಬೇಕು.

ಬ್ಯಾಂಕಿನ ಪ್ರಾಂಗಣಗಳು ವಿಶಾಲವಾಗಿದ್ದು, ಸರಿಯಾದ ಪೀಠೋಪಕರಣಗಳು, ಕುಡಿಯುವ ನೀರಿನ ವ್ಯವಸ್ಥೆ ಮುಂತಾದವುಗಳಿಗೆ ಹೆಚ್ಚಿನ ಗಮನ ಕೊಡಬೇಕು.

ಕೆಲವು ವಿಶೇಷ ಶಾಖೆಗಳಲ್ಲಿ ಪ್ರತ್ಯೇಕ ವರ್ಗದ ಗ್ರಾಹಕರಿಗಾಗಿ ಊಟದ ವ್ಯವಸ್ಥೆಯನ್ನು ಆರಂಭಿಸಿ ಅವಶ್ಯವಿದ್ದಲ್ಲಿ ಅಂತಹ ಸೇವೆಗಳಿಗಾಗಿ ಅವರಿಗೆ ಸೇವಾ ವೆಚ್ಚವನ್ನು ವಿಧಿಸಬೇಕು.

ಈಗಿರುವಂತೆ ಶಾಖಾಗಾತ್ರ ನಿಯಮದಲ್ಲಿ ರೂ. 200 ಕೋಟಿ ಹಾಗೂ ಒಟ್ಟು ಸಿಬ್ಬಂದಿಯ ಸಂಖ್ಯೆ 100 ದಾಟದಂತೆ ಮಿತಿಗೊಳಿಸಿರುವುದನ್ನು ಮತ್ತೊಮ್ಮೆ ಪರಿಷ್ಕರಿಸಬೇಕು.

ಶ್ರಮಶಕ್ತಿಯನ್ನು ಹೊಸದಾಗಿ ಹಂಚಿಕೆ ಮಾಡಿ ಅದು ಅವಶ್ಯಕತೆಯ ಆಧಾರದ ಮೇಲೆ ದೊರೆಯುವಂತಿರಬೇಕು.

ಸಾರ್ವತ್ರಿಕ ಬ್ಯಾಂಕುಗಳು ಒಟ್ಟು ಸೇರಿ ನೀಡುವ ಜಾಹೀರಾತಿಗಿಂತ ಆಯಾ ಬ್ಯಾಂಕುಗಳು ತಮ್ಮದಾದ ಸ್ವಂತ ಜಾಹಿರಾತುಗಳನ್ನು ತಂತಮ್ಮ ಅವಶ್ಯಕತೆಗಳಿಗೆ ಹೊಂದಿಕೆಯಾಗುವಂತೆ ನೀಡಬೇಕು. ಸಾರ್ವತ್ರಿಕ ಬ್ಯಾಂಕುಗಳ ಬಗ್ಗೆ ಏನಾದರೂ ಜಾಹಿರಾತು ಕೊಡುವುದಿದ್ದಲ್ಲಿ ಭಾರತೀಯ ಬ್ಯಾಂಕುಗಳ ಒಕ್ಕೂಟ ಕೊಡಬೇಕು.

ಪಾಸಸ್ಥಳ ಪ್ರದೇಶದಲ್ಲಿರುವ ಶಾಖೆಗಳು ಭಾನುವಾರವನ್ನು ಕೆಲಸದ ದಿನವನ್ನಾಗಿ ಪರಿಗಣಿಸಿ ಅನಂತರದ ಯಾವುದಾದರೂ ದಿನವನ್ನು ವಾರದ ಬಿಡುವು ದಿನವನ್ನಾಗಿ ಉಪಯೋಗಿಸಬಹುದು.

ಬ್ಯಾಂಕುಗಳು ಈಗಿರುವ ಭದ್ರತೆಯ ಸ್ಥಿತಿಯನ್ನು ಸುಧಾರಿಸಿಕೊಳ್ಳುವುದರ ಮೂಲಕ ಸಿಬ್ಬಂದಿಯಲ್ಲಿ ಹಾಗೂ ಸಾರ್ವಜನಿಕರಲ್ಲಿ ವಿಶ್ವಾಸವನ್ನು ಮೂಡಿಸಿಕೊಳ್ಳಬೇಕು.

ಸರ್ಕಾರಿ ಕಛೇರಿಗಳು, ವಿಭಾಗಗಳು ತಮ್ಮ ಸಂಬಳ, ಪಿಂಚಣಿಯನ್ನು ಪಡೆಯುವ ದಿನಗಳನ್ನು ಬೇರೆ ಬೇರೆ ದಿನಾಂಕಗಳಂದು ಆಯ್ದುಕೊಂಡು ಒಂದೇ ಬಾರಿಗೆ ಬ್ಯಾಂಕಿನಲ್ಲಾಗುವ ನೂಕುನುಗ್ಗಲಿನ ಪರಿಸ್ಥಿತಿಯನ್ನು ನಿವಾರಿಸಲು ಅವಕಾಶ ಮಾಡಿಕೊಡಬೇಕು.

[ಪುಟ 11ಕ್ಕೆ

# ಬ್ಯಾಂಕಿಂಗ್ ಕ್ಷೇತ್ರದಲ್ಲಿ ಗಣಕೀಕರಣ

**ಸದಾ ವಿಸ್ತರಿಸುತ್ತಿರುವ ಭಾರತೀಯ ಬ್ಯಾಂಕಿಂಗ್ ಕ್ಷೇತ್ರದಲ್ಲಿ ವ್ಯವಹಾರ ಸುಸೂತ್ರವಾಗಿ ನಡೆಯಲು ವ್ಯವಸ್ಥಿತ ರೀತಿಯಲ್ಲಿ ಗಣಕವನ್ನಳವಡಿಸುವುದು ಅಗತ್ಯ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಎಲ್ಲಿ, ಹೇಗೆ, ಎಷ್ಟು ? ಎಂಬುದೇ ತಕರಾರಿನ ಪ್ರಶ್ನೆ.**

ಶ್ರೀಮತಿ ಸಿ. ಎನ್. ರತ್ನ
ಸ್ಟೇಟ್ ಬ್ಯಾಂಕ್ ಆಫ್ ಮೈಸೂರು
ಕೋಟೆ ಶಾಖೆ
ಬೆಂಗಳೂರು

ಈಚಿನ ದಿನಗಳಲ್ಲಿ ಎಲ್ಲರ ಮನೆಗಳಲ್ಲಿ, ಬಾಯಲ್ಲಿ ನಲಿದಾಡುತ್ತಿರುವ ಪದ ಗಣಕ. ಪ್ರತಿ ಮನೆಯ ಮಕ್ಕಳಿಗೂ ಗಣಕ ಎಂಬ ಪದದ ಪರಿಚಯ ಉಂಟು. ಈಗ ರೈಲ್ವೆ ನಿಲ್ದಾಣದಲ್ಲಿ ಜಾಗವನ್ನು ಕಾದಿರಿಸುವುದರಿಂದ ಹಿಡಿದು ರಾಕೆಟ್‌ಗಳ ಉಡಾವಣೆಗಳ ತನಕವೂ ಗಣಕದ ಪ್ರಯೋಜನ ಉಂಟು. ಈ ಮಹಾಯಂತ್ರ ಈಗ ಬ್ಯಾಂಕಿಂಗ್ ಪ್ರಪಂಚಕ್ಕೂ ಕಾಲಿಟ್ಟಿದೆ.

ಯಾವುದೇ ಒಂದು ಸಂಘ ಸಂಸ್ಥೆಯ ಮುನ್ನಡೆ ಮತ್ತು ಉತ್ಪಾದಕತೆ ಕೆಳಗೆ ಹೇಳಿರುವ ಮೂರು ಅಂಶಗಳನ್ನು ಅವಲಂಬಿಸಿದೆ.

1 ಮಾನವ ಯತ್ನ
2 ವ್ಯವಸ್ಥೆ ಮತ್ತು ಕಾರ್ಯಾಚರಣೆ
3 ತಂತ್ರಜ್ಞಾನ

ಈ ಮೂರರಲ್ಲಿ ತಂತ್ರಜ್ಞಾನದ ಬೆಳವಣಿಗೆ ಅಡೆತಡೆ ಇಲ್ಲದೆ ಸಾಗುವಂತಹದು. ಕೈಗಾರಿಕಾ ಕ್ರಾಂತಿಯ ಅನಂತರ ಪ್ರಪಂಚದಲ್ಲಿ ಮಾನವನ ಬದಲು ದೊಡ್ಡ ರೀತಿಯಲ್ಲಿ ಯಂತ್ರಗಳು ಪ್ರವೇಶ ಮಾಡಿದವು. ಅದೇ ಸಮಯದಲ್ಲಿಯೇ ಹೊಸ ಹೊಸ ಯಂತ್ರಗಳಪರಿಶೋಧನೆಗೆ ಎಡೆಯಾಯಿತು. ಅದರ ಪರಿಣಾಮವೇ ಗಣಕ. ಈ ಅಗಾಧವಾದ ಮಾನವ ನಿರ್ಮಿತ ಯಂತ್ರದ ಅನ್ವೇಷಣೆಗೆ ದಾರಿಮಾಡಿಕೊಟ್ಟವರು ಶ್ರೀಮಾನ್ ಚಾರ್ಲ್ಸ್ ಬಬೇಜ್ 1883ರಲ್ಲಿ.

ಬ್ಯಾಂಕುಗಳ ರಾಷ್ಟ್ರೀಕರಣವಾದ ಅನಂತರ ಅವುಗಳ ವ್ಯವಹಾರದಲ್ಲಿ ಗಣನೀಯವಾದ ಬೆಳವಣಿಗೆ ಕಾಣಿಸಿಕೊಂಡಿತು. ದೇಶಾದ್ಯಂತ ನಮ್ಮ ಆರ್ಥಿಕ ಕ್ಷೇತ್ರದಲ್ಲಿ ಬದಲಾವಣೆಯ ಗಾಳಿ ಬೀಸಲು ಪ್ರಾರಂಭಿಸಿತು. ನಿರ್ದಿಷ್ಟ ದಿಕ್ಕುಗಳಲ್ಲಿ ಸಂಪನ್ಮೂಲಗಳು ಹರಿದು ನಿರ್ದಿಷ್ಟ ವೇಗದಲ್ಲಿ ಬ್ಯಾಂಕಿಂಗ್ ಚಟುವಟಿಕೆಗಳು ನಡೆಯುವ ಗುರಿ ಹೊಂದಿತು. ಬ್ಯಾಂಕ್ ಶಾಖೆಗಳು ದಿನೇದಿನೇ ಹೆಚ್ಚಿದವು.

1969ರಲ್ಲಿ 9,000 ಬ್ಯಾಂಕ್ ಶಾಖೆಗಳಿದ್ದು ಈಗ 54,000 ಶಾಖೆಗಳಾಗಿವೆ ; ಹಾಗೂ ಠೇವಣಿ ರೂ. 5,000 ಕೋಟಿಯಿಂದ ರೂ. 2 ಲಕ್ಷ ಕೋಟಿಯಾಗಿದೆ. ಇದು ಬ್ಯಾಂಕಿಂಗ್ ವ್ಯವಸ್ಥೆಯಲ್ಲಾಗುತ್ತಿರುವ ಅದ್ಭುತ ಬೆಳವಣಿಗೆಯ ಒಂದು ನಿದರ್ಶನವಾಗಿದೆ. ಈ ಅದ್ಭುತ ಬೆಳವಣಿಗೆಯೇ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಗಣಕಯಂತ್ರದ ಪ್ರವೇಶಕ್ಕೆ ಹಿನ್ನೆಲೆ.

## ಅಗತ್ಯ

ಮೊದಲಿಗೆ ಹೆಚ್ಚು ವ್ಯವಹಾರ ಹೊಂದಿದ ಶಾಖೆಗಳನ್ನು, ಮುಖ್ಯವಾಗಿ ನಗರ ಪ್ರದೇಶದಲ್ಲಿರಾವ ಹೆಚ್ಚು ಚಟುವಟಿಕೆಯ ಶಾಖೆಗಳನ್ನು ಗಣಕೀಕರಿಸುತ್ತಾ ಬಂದರು. ಈ ಶಾಖೆಗಳನ್ನು ಗಣಕೀಕರಿಸುವುದಕ್ಕೆ ಮೊದಲು ಬ್ಯಾಂಕಿಂಗ್‌ನಲ್ಲಿ ಗಣಕೀಕರಣ ಬೇಕೆ ? ಎಂಬುದನ್ನು ಪರಿಶೀಲಿಸಲು 1983ರಲ್ಲಿ ಭಾರತ ಸರ್ಕಾರ ಒಂದು ಸಮಿತಿಯನ್ನು ನೇಮಿಸಿತು. ರಂಗರಾಜನ್‌ರವರ ನೇತೃತ್ವದಲ್ಲಿ ಈ ಸಮಿತಿ 1985ರಲ್ಲಿ ಕೆಲವು ಪ್ರಮುಖ ಶಿಫಾರಸುಗಳನ್ನು ಮಾಡಿತು.

1 ಯಾವ ಸ್ಥಳದಲ್ಲಿ ಮತ್ತು ಯಾವ ವ್ಯವಹಾರದ ಗಣಕೀಕರಣವಾಗಬೇಕೆನ್ನುವುದನ್ನು ಗುರುತಿಸುವುದು
2 ಆಯಾ ಕೆಲಸಕ್ಕೆ ಸರಿಹೊಂದುವ ಯಂತ್ರವನ್ನು ಅನುಮೋದಿಸುವುದು
3 ದತ್ತಾಂಶದ ಸುಲಭ ಸಾಧ್ಯತೆ

ಈ ಸಮಿತಿ ಮೂರು ಮಟ್ಟಗಳಲ್ಲಿ ಗಣಕೀಕರಣದ ಶಿಫಾರಸು ಮಾಡಿತು

(a) ಶಾಖಾ ಮಟ್ಟ
(b) ವಲಯ ಮಟ್ಟ
(c) ಮುಖ್ಯ ಕಛೇರಿಯ ಮಟ್ಟ

ಎಲ್ಲಾ ಶಾಖೆಗಳ ವ್ಯವಹಾರಗಳನ್ನೂ ಮುಖ್ಯ ಕಛೇರಿಯು ನಿಯಂತ್ರಿಸಬಹುದು. ಈ ಏಕೈಕ ಯಂತ್ರ ಶಾಖೆಗಳಲ್ಲಿ ಕೆಳಗೆ ಹೇಳಿರುವ ಕೆಲವು ಕಾರ್ಯಗಳನ್ನು ಅಚ್ಚುಕಟ್ಟಾಗಿ ಮಾಡುತ್ತದೆ.

1 ಗ್ರಾಹಕ ಸೇವೆಯಲ್ಲಿ ಸುಧಾರಣೆ
2 ಉತ್ತಮ ಮನೆವಾರ್ತೆ
3 ಶೀಘ್ರ ಸಮನ್ವಯ

ನಮ್ಮ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಗಣಕದ ಪ್ರವೇಶ ಹಂತಹಂತವಾಗಿ ಆಗುತ್ತಿದೆ. ಈಗಂತೂ ಖಾಸಗಿ ಬ್ಯಾಂಕ್ ಮತ್ತು ವಿದೇಶಿ ಬ್ಯಾಂಕ್‌ಗಳ ಜೊತೆಗೆ ನೇರ ಸ್ಪರ್ಧೆಗೆ ನಮ್ಮ ಭಾರತೀಯ ಬ್ಯಾಂಕ್‌ಗಳು ಇಳಿದಿವೆ.

## ಪ್ರಗತಿ

ಗಣಕೀಕರಣದಿಂದ ಮುಖ್ಯ ಕಛೇರಿಯ ಮಟ್ಟದಲ್ಲಾಗುತ್ತಿರುವ ಸುಧಾರಣೆ ನಂಬಲಸಾಧ್ಯ. ಮೊದಲು ತಿಂಗಳುಗಟ್ಟಲೆ ತೆಗೆದುಕೊಳ್ಳುತ್ತಿದ್ದ ಶಾಖೆಗಳ ಲೆಕ್ಕಪತ್ರದ ತಾಳೆ ಈಗ ಆಯಾ

# ಉತ್ತಮ ಗ್ರಾಹಕಸೇವೆ

[ಪುಟ 10ರಿಂದ ಮುಂದುವರಿದಿದೆ]

ಬ್ಯಾಂಕ್ ತನ್ನ ಗ್ರಾಹಕನಿಗೆ 'ಸಂಕೇತ ಶಬ್ದ'ವನ್ನು ಕೊಡುವ ಮೂಲಕ ಫೋನಿನಲ್ಲಿ ಗ್ರಾಹಕನ ವಿಚಾರಣೆಗೆ ಉತ್ತರಿಸುವ ಮೂಲಕ ಗ್ರಾಹಕರ ಬ್ಯಾಂಕಿನ ಭೇಟಿಯನ್ನು ಕಡಿಮೆ ಗೊಳಿಸುವುದು.

ಉದರಿಪತ್ರ ಮತ್ತು 'ಸ್ವಯಂಚಲಿ ಸರಾಫ್ ಯಂತ್ರ'ವನ್ನು ಉಳಿದ ಬ್ಯಾಂಕುಗಳ ಸಹಭಾಗಿತ್ವದೊಡನೆ ಜಾರಿಗೆ ಬಿಡಬೇಕು.

ಉತ್ತಮ ಗ್ರಾಹಕ ಸೇವೆ ನೀಡಿದ ಶಾಖೆಗಳನ್ನು ಗುರ್ತಿಸಿ, ಪುರಸ್ಕರಿಸಿ, ಬಹುಮಾನ ಕೊಡುವ ಪದ್ಧತಿಯನ್ನು ಜಾರಿಗೆ ತರಬೇಕು.

ಸರ್ಕಾರಿ ವ್ಯಕ್ತಿಗಳಿಗೆ, ಸಂಸ್ಥೆಗಳಿಗೆ ನೀಡುವ ಹಣಕ್ಕಾಗಿ ಈಗಿರುವ ಬಿಲ್ಲುಗಳ ಬದಲಾಗಿ ಚೆಕ್ಕುಗಳನ್ನು ನೀಡಬೇಕು.

ಬ್ಯಾಂಕಿನ ವಿಶೇಷ ವ್ಯವಹಾರಗಳಿಗೆ ಏನಾದರೂ ಕಾಲಮಿತಿಯಿದ್ದಲ್ಲಿ ಅದನ್ನು ಶಾಖಾ ಪ್ರಾಂಗಣದಲ್ಲಿ ಎಲ್ಲರಿಗೂ ಕಾಣಿಸುವಂತೆ ಪ್ರಕಟಿಸಿರಬೇಕು.

●

(ಜನವರಿ 1992ರ ಐ. ಬಿ. ಎ. ಬುಲೆಟಿನ್‌ನಿಂದ)

ವಾರದಲ್ಲೇ ಆಗುತ್ತಿದೆ. ಪ್ರತಿ ಶಾಖೆಯಿಂದ ಕೇಂದ್ರ ಕಛೇರಿಗೆ ಬರುವ ಪ್ರಗತಿ ವರದಿಯನ್ನು ಗಣಕೀಕರಿಸಿ, ಲಾಭ ನಷ್ಟಗಳನ್ನು ತಾಳೆ ಮಾಡಿ, ಕೇಂದ್ರ ಕಛೇರಿಯಲ್ಲಿ ಆಡಳಿತ ವ್ಯವಸ್ಥಾಪಕರು ಹೆಚ್ಚು ವೇಗವಾಗಿ ನಾನಾ ವಿಭಾಗದಲ್ಲಿರುವ ಅಸಮತೋಲಗಳನ್ನು ನಿವಾರಿಸಬಹುದು.

ವಿದೇಶಿ ವಿನಿಮಯ ವಿಭಾಗದಲ್ಲಂತೂ ಗಣಕದ ಪ್ರಭಾವ ಅಷ್ಟಿಷ್ಟಲ್ಲ. ನಿಮಿಷ ನಿಮಿಷಕ್ಕೂ ಬದಲಾಗುತ್ತಿರುವ ವಿನಿಮಯ ದರಗಳನ್ನು ತಿಳಿದುಕೊಂಡು ನಾವು ಯೋಚಿಸುವುದಕ್ಕಿಂತ ಶೀಘ್ರವಾಗಿ ಕಾರ್ಯರೂಪಕ್ಕೆ ತರುತ್ತವೆ ಈ ಗಣಕಗಳು. ವಿದೇಶಿ ವಿನಿಮಯ ವ್ಯಾಪಾರ ಹೆಚ್ಚು ವೈಜ್ಞಾನಿಕ ಮತ್ತು ಸುಧಾರಿತವಾಗುತ್ತಿದೆ. ವಿದೇಶಿ ವಿನಿಮಯ ವಿಭಾಗದಲ್ಲಿ ಕಾರ್ಯದಕ್ಷತೆ ಮತ್ತು ನಿಖರತೆ ಹೆಚ್ಚಾಗುತ್ತಿದೆ. ಭಾರತೀಯ ರಿಸರ್ವ್ ಬ್ಯಾಂಕ್ ರಾಷ್ಟ್ರೀಕೃತ ಬ್ಯಾಂಕ್‌ಗಳಿಗೆ ವಿದೇಶಿ ವಿನಿಮಯ ವ್ಯಾಪಾರದಲ್ಲಿ ಆಗುವ ತೊಂದರೆಗಳನ್ನು ತಾವೇ ನಿಯಂತ್ರಿಸಬೇಕೆನ್ನುವ ಆದೇಶ ನೀಡಿದೆ. ಇದು ಮಾನವಯುಕ್ತವಲ್ಲದಾದರೆ ಹೆಚ್ಚಿನ ಸಮಯ ತೆಗೆದುಕೊಳ್ಳುವ ಸಾಧ್ಯತೆ ಇರುವುದರಿಂದ, ಗಣಕೀಕರಣದಲ್ಲಿ ವಿದೇಶಿ ವಿನಿಮಯ ವಿಭಾಗಕ್ಕೆ ಪ್ರಾಧಾನ್ಯ ಕೊಡಬೇಕು.

ಅಂತರ ಬ್ಯಾಂಕ್ ತೀರುವಳಿಯಲ್ಲಂತೂ ಗಣಕದ ಪಾತ್ರ ಹಿರಿದು. ಚೈತನ್ಯಶೀಲವಾಗಿ ಯೋಚಿಸಿದರೆ. ಗಣಕದ ಪೂರ್ಣ ಪ್ರಯೋಜನ ಪಡೆಯುತ್ತಿರುವ ಬ್ಯಾಂಕ್ ಎಂದು ಅಮಾನತ್ ಸಹಕಾರಿ ಬ್ಯಾಂಕ್ ಅನ್ನು ಉದಾಹರಿಸಬಹುದು. ಈ ಬ್ಯಾಂಕ್ 6 ಶಾಖೆಗಳನ್ನು ಒಳಗೊಂಡು ಒಂದು ಗಣಕಯಂತ್ರ ಜಾಲವನ್ನು ಹೊಂದಿದೆ. ಯಾವುದೇ ಶಾಖೆಯ ಗ್ರಾಹಕ ಇನ್ನಾವುದೇ ಶಾಖೆಯಲ್ಲಿ ತನ್ನ ಹಣವನ್ನು ಪಡೆಯಬಹುದು.

ಇದೆಲ್ಲವನ್ನೂ ಗಮನಿಸಿದಾಗ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಗಣಕೀಕರಣ ಎಷ್ಟು ಮುಖ್ಯ ಎಂಬುದು ಮನವರಿಕೆಯಾಗುತ್ತದೆ. ಇವೆಲ್ಲವನ್ನೂ ಸುಯೋಜಿತವಾಗಿ ಮಾಡಲು, ಅಳವಡಿಸಲು, ವ್ಯಾಪಕ ಸಲಹೆಯನ್ನು ನೀಡಲು ಇನ್ನೊಂದು ಸಮಿತಿಯ ನೇಮಕಾತಿ ಅಗತ್ಯವೆಂದು ಅನಿಸುತ್ತದೆ. ●



# ಬ್ಯಾಂಕು ಮತ್ತು ಮಾನವ ಸಂಪನ್ಮೂಲ

**ಉದ್ಯಮ ಪ್ರಪಂಚದಲ್ಲಿ ಮಾನವ ದುಡಿಮೆ ಕೇವಲ ಒಂದು ನಿವೇಶವಲ್ಲ. ಅದು ಉಳಿದೆಲ್ಲ ಸಂಪನ್ಮೂಲಗಳಿಗಿಂತ ವಿಭಿನ್ನವಾದ್ದು, ವಿಶಿಷ್ಟವಾದ್ದು, ಮಹತ್ತ್ವಪೂರ್ಣವಾದ್ದು. ಈ ಬಗ್ಗೆ ಅರಿವು ನಮ್ಮ ಬ್ಯಾಂಕಿಂಗ್ ಕ್ಷೇತ್ರದಲ್ಲಿ ತಡವಾಗಿಯಾದರೂ ನಿಧಾನವಾಗಿ ಮೂಡತೊಡಗಿದೆ.**

ಶ್ರೀಮತಿ
ಎಚ್. ಆರ್. ವಿಜಯಲಕ್ಷ್ಮಿ
ಸ್ಟೇಟ್ ಬ್ಯಾಂಕ್ ಆಫ್ ಮೈಸೂರು,
ಮುಖ್ಯ ಶಾಖೆ, ಮಂಡ್ಯ

ಇಂದಿನ ದಿನಗಳಲ್ಲಿ ಮಾನವ ಒಬ್ಬ ದಕ್ಷ ಆಡಳಿತ ಸಂಪನ್ಮೂಲವೆಂಬುದು ಎಲ್ಲರಿಗೂ ಅನುಭವ ವೇದ್ಯವಾದುದು. ಈ ಸಂಪನ್ಮೂಲದ ಸಾಮರ್ಥ್ಯದ ವ್ಯವಸ್ಥಾಪನೆ ಹಾಗೂ ಬಳಕೆ ಅಭಿವೃದ್ಧಿಶೀಲ ಕ್ಷೇತ್ರಗಳಲ್ಲಿ ಅತ್ಯಂತ ಅವಶ್ಯಕ. ಒಂದು ಸಂಸ್ಥೆಯು ಸಾಧಕ-ಬಾಧಕಗಳು, ವ್ಯಕ್ತಿಯ ಆಸೆ, ಹಾಗೂ ಆಕಾಂಕ್ಷೆಗಳನ್ನು ಒಳಗೊಳ್ಳಬೇಕೆಂಬುದನ್ನು ಹೊಂದಿಕೊಂಡಿರುತ್ತವೆ. ಆದುದರಿಂದ ವ್ಯಕ್ತಿಯು ಪ್ರತಿಯೊಂದು ಸಂಸ್ಥೆಯ ಜೀವಾಳ.

ಒಂದು ಸಂಸ್ಥೆ ಒಂದು ಸಾಮಾಜಿಕ ವ್ಯವಸ್ಥೆ. ಆ ಸಂಸ್ಥೆಯ ಕೆಲಸಗಾರ ಅಲ್ಲಿಯ ಪ್ರಮುಖ ಅಂಗ. ಒಬ್ಬ ಕೆಲಸಗಾರ ಸಂಸ್ಥೆಯ ಒಂದು ಬಿಡಿಭಾಗವಲ್ಲ. ಸಂಪೂರ್ಣ ಸಂಸ್ಥೆಯ ಆಧಾರಸ್ತಂಭ. ಮನುಷ್ಯನಿಗೆ ಅವನ ಪ್ರತಿ ಅಂಗವೂ ಎಷ್ಟು ಮುಖ್ಯವೋ. ಹಾಗೇ ಒಂದು ಸಂಸ್ಥೆಗೆ ಪ್ರತಿಯೊಬ್ಬ ವ್ಯಕ್ತಿಯೂ ಮುಖ್ಯ.

ಒಂದು ಸಂಸ್ಥೆ ತನ್ನ ಬೆಳವಣಿಗೆಗಾಗಿ ಬಂಡವಾಳವನ್ನು ತೊಡಗಿಸುವಂತೆ ವ್ಯಕ್ತಿಗಳು ತಮ್ಮ ಹೆಚ್ಚಿನ ವಿದ್ಯಾರ್ಹತೆ. ವೃತ್ತಿ-ತರಬೇತಿ ಮತ್ತು ಇಂತಹ ಇತರೆ ಉತ್ಪಾದಕತೆಯನ್ನು ಹೆಚ್ಚಿಸುವಂತಹ ಅಂಶಗಳಿಂದ ತಮ್ಮನ್ನು ತಾವೇ ತೊಡಗಿಸಿಕೊಳ್ಳುತ್ತಾರೆ. ಅರ್ಥಶಾಸ್ತ್ರಜ್ಞರು ಇಂತಹ ಬಂಡವಾಳವನ್ನು 'ಮಾನವ ಬಂಡವಾಳ'ವೆನ್ನುತ್ತಾರೆ. ಸಂಸ್ಥೆಗಳು ತಾವು ಹೂಡಿದ ಬಂಡವಾಳಕ್ಕೆ ಫಲವನ್ನು ನಿರೀಕ್ಷಿಸುವಂತೆ, ವ್ಯಕ್ತಿಯೂ ತನ್ನ ಸಾಮರ್ಥ್ಯಕ್ಕೆ ಪ್ರತಿಯಾದ ವರಮಾನ, ಕಾಲ, ಸಾಧನ ಸೌಲಭ್ಯಗಳು ಮುಂತಾದುವನ್ನು ನಿರೀಕ್ಷಿಸುತ್ತಾನೆ.

ಬ್ಯಾಂಕಿಂಗ್ ವ್ಯವಸ್ಥೆ ದೇಶದ ಪ್ರಗತಿಯ ಸಾಧನೆಯಲ್ಲಿ ಒಂದು ಪ್ರಮುಖ ಸ್ಥಾನದಲ್ಲಿದೆ. 1969ರಲ್ಲಿ ಆದ ಬ್ಯಾಂಕುಗಳ ರಾಷ್ಟ್ರೀಕರಣಕ್ಕೆ ಮೊದಲು, ಬ್ಯಾಂಕುಗಳ ವ್ಯವಹಾರ ಹಾಗೂ ವಿಸ್ತರಣೆ ನಿಧಾನಗತಿಯಲ್ಲಿತ್ತು. ಆದರೆ ರಾಷ್ಟ್ರೀಕರಣದ ಅನಂತರ, ಈ ವ್ಯವಸ್ಥೆಯು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ವ್ಯವಸ್ಥಿತವಾಗಿ ಮುಂದುವರಿಯುತ್ತಿದೆ. ಗಾತ್ರ ಹಾಗೂ ಗುಣಮಟ್ಟದಲ್ಲಿ ಹಲವಾರು ಬದಲಾವಣೆಗಳನ್ನು ಹೊಂದಿದೆ. ರಾಷ್ಟ್ರದ ಅಭಿವೃದ್ಧಿಯು ಬ್ಯಾಂಕಿಂಗ್ ವ್ಯವಸ್ಥೆಯ ಕಾರ್ಯಚಟುವಟಿಕೆಯನ್ನಾಧರಿಸಿದೆ.

## ವ್ಯಕ್ತಿಪ್ರಾಮುಖ್ಯ

ಈಗಾಗಲೇ ಗಣಕಗಳನ್ನು ಅಳವಡಿಸಿಕೊಂಡಿರುವ ಬ್ಯಾಂಕ್ ಶಾಖೆಗಳ ಹೊರತಾಗಿ, ಉಳಿದೆಲ್ಲಾ ಬ್ಯಾಂಕುಗಳೂ ವ್ಯಕ್ತಿ ಕಾರ್ಯ ನಿರ್ವಹಣೆಯನ್ನು ಅವಲಂಬಿಸಿವೆ. ಬ್ಯಾಂಕುಗಳ ಸೇವಾ ವ್ಯವಸ್ಥೆಯಲ್ಲಿ ಮಾನವನ ಪಾತ್ರ ಬಹು ಪ್ರಮುಖವಾಗಿದೆ.

ಬ್ಯಾಂಕಿಂಗ್ ಮೂಲಭೂತ ಉದ್ದೇಶವಾದ 'ಗ್ರಾಹಕಸೇವೆ' ಗಣಕಗಳ ಅಳವಡಿಕೆಯಿಂದ ಒಂದು ರೀತಿಯಲ್ಲಿ ಕೆಲಸದ ಶೀಘ್ರತೆಯನ್ನು ಹೆಚ್ಚಿಸುವಲ್ಲಿ ತೃಪ್ತಿಯನ್ನು ಕೊಡುವುದಾದರೂ, ಮತ್ತೊಂದು ರೀತಿಯಲ್ಲಿ ಅಸಮಾಧಾನಕರವಾಗುತ್ತದೆ. ಅಲ್ಲದೆ ಗಣಕಗಳನ್ನು ಎಲ್ಲಾ ರೀತಿಯ ಕೆಲಸಗಳಿಗೂ ತೊಡಗಿಸಲು ಸಾಧ್ಯವಿಲ್ಲ.

ಉದಾಹರಣೆಗೆ, ಕೆಲವು ಗ್ರಾಹಕರಿಗೆ ಬ್ಯಾಂಕಿಗೆ ಬಂದಾಗ ತಮ್ಮ ವೈಯಕ್ತಿಕ ವಿಷಯಗಳನ್ನೂ ಬ್ಯಾಂಕರನೊಂದಿಗೆ ಹಂಚಿಕೊಳ್ಳುವ ಆಸೆಯಿರುತ್ತದೆ. ಗ್ರಾಹಕ ಬ್ಯಾಂಕಿನಲ್ಲಿ ಹಣವನ್ನು ಇಡುತ್ತಿರುವ ಬಗ್ಗೆ, ತನ್ನ ಕಷ್ಟ-ಸುಖಗಳ ಬಗ್ಗೆ, ತಾನು ಹಣ ಸಂಪಾದಿಸಿದ ಬಗ್ಗೆ, ಹೀಗೆ ಅನೇಕ ವಿಷಯಗಳನ್ನು, ತನ್ನ ಭಾವನೆಗಳನ್ನು ಬ್ಯಾಂಕರನಲ್ಲಿ ಹೇಳಿಕೊಳ್ಳಲು ಬಯಸುತ್ತಾನೆ. ಅವನ ಸಮಸ್ಯೆಗಳನ್ನೂ, ವಿಷಯ

ಗಳನ್ನೂ ಸಮಾಧಾನದಿಂದ ಆಲಿಸುತ್ತಾ, ಸೂಕ್ತ ಪರಿಹಾರಗಳನ್ನು ನೀಡುತ್ತಾ, ಅವನನ್ನು ತೃಪ್ತಿ ಪಡಿಸಬೇಕಾಗುತ್ತದೆ. ಈ ರೀತಿಯ ಎಲ್ಲಾ ಬಗೆಯ ಬೇಡಿಕೆಗಳನ್ನೂ ಪೂರೈಸಲು ವ್ಯಕ್ತಿಯ ಆವಶ್ಯಕತೆ ಬಹುಮುಖ್ಯ. ಈ ಬಗೆಯ ಕೆಲಸವನ್ನು ಗಣಕ ಮಾಡಲಾರದು. ಹೀಗಾಗಿ ಮಾನವ ಸಂಪನ್ಮೂಲ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬಹು ಮುಖ್ಯವಾಗಿದೆ.

**ಹೊಂದಾಣಿಕೆಯ ಅಭಾವ**

ಇತ್ತೀಚಿಗೆಗೆ ಬ್ಯಾಂಕ್ ಕೆಲಸಗಳು ಯಾಂತ್ರಿಕ ವಾಗುತ್ತಿವೆ. ಜನಸಂಖ್ಯೆಯ ಬೆಳವಣಿಗೆಯ ಜೊತೆಗೆ ಬ್ಯಾಂಕ್ ಕೆಲಸಕಾರ್ಯಗಳೂ ಬೆಳೆಯುತ್ತಿವೆ. ಸಂಸ್ಥೆಯು ಶಕ್ತಿ ಹಾಗೂ ಗಾತ್ರಗಳಲ್ಲಿ ಬೆಳೆಯುತ್ತಾ ಹೋದಂತೆ,ವ್ಯಕ್ತಿಯ ಬಗೆಗಿನ ಆಸಕ್ತಿ ಕ್ಷೀಣಸುತ್ತಿದೆ. ಇದರಿಂದಾಗಿ ಕೆಲಸದಲ್ಲಿ ವ್ಯಕ್ತಿನಿಷ್ಠೆ ಕಡಿಮೆಯಾಗು ತ್ತಿದೆ. ವಿಶೇಷವಾಗಿ ಸಿಬ್ಬಂದಿ ವರ್ಗದವರಲ್ಲಿ ಕೆಲಸದ ಬಗ್ಗೆ ಆಸಕ್ತಿ ಕಡಿಮೆಯಾಗುತ್ತಿದೆ. ಇದರಿಂದ ಅತೃಪ್ತಿ, ಅಸಮಾಧಾನಗಳು ಕಂಡು ಬರುತ್ತಿವೆ. ಇದಕ್ಕೆ ಜೊತೆಜೊತೆಯಾಗಿ ವರ್ಗಾ ವಣೆಯ ಸಮಸ್ಯೆಗಳು ಸೇರಿಕೊಂಡಿವೆ. ಬ್ಯಾಂಕುಗಳ ಆವಶ್ಯಕತೆಗೆ ಅನುಗುಣವಾಗಿ ಸಿಬ್ಬಂದಿ ನೇಮಕಾತಿ ಇಲ್ಲದಿರುವುದರಿಂದ ಕೆಲಸದ ಹೊರೆ ಹೆಚ್ಚಾಗಿರುವ ಸಮಸ್ಯೆ ಒಂದು ಕಡೆಯಾದರೆ, ವಿಭಿನ್ನ ಮನೋ ಭಾವದ ಕೆಲಸಗಾರರ ನೇಮಕಾತಿಯಿಂದಾಗಿ ಹೊಂದಾಣಿಕೆಯ ಅಭಾವದ ಸಮಸ್ಯೆ ಮತ್ತೊಂದು ಕಡೆ.

**ತರಬೇತಿ**

ಬ್ಯಾಂಕಿಂಗ್ ಕೆಲಸ ಯಾಂತ್ರಿಕವಾದುದಾದರೂ ತರಬೇತಿಯ ಅವಶ್ಯಕತೆ ಇದೆ. ಕೆಲಸದಲ್ಲಿ ನಿಪುಣತೆ, ದಕ್ಷತೆ, ಶೀಘ್ರತೆ ಇವುಗಳನ್ನು ತರಬೇತಿಯಿಂದ ಪಡೆಯಬಹುದು. ಒಂದೇ ರೀತಿಯ, ಬದಲಾವಣೆ ಯಿಲ್ಲದ ಕೆಲಸವಾದರೂ ಮಾರ್ಗದರ್ಶನದ ಆವಶ್ಯ ಕತೆ ಇದೆ. ತರಬೇತಿ ಸಂಸ್ಥೆಗಳು ಈ ನಿಟ್ಟಿನಲ್ಲಿ ಬಹಳ ಶ್ಲಾಘನೀಯ ಕೆಲಸವನ್ನು ಮಾಡುತ್ತಿವೆ. ಎಲ್ಲರಿಗೂ ತರಬೇತಿಯ ಅವಶ್ಯಕತೆಯಿದ್ದರೂ ಹಲವಾರು ಕಾರಣಗಳಿಂದ ಎಲ್ಲರಿಗೂ ಸಂಸ್ಥೆಗೇ ಹೋಗಿ ತರಬೇತಿಯನ್ನು ಪಡೆಯಲು ಸಾಧ್ಯವಿಲ್ಲ ದಿರಬಹುದು. ಅಂತಹವರಿಗಾಗಿ ಈಗ, ದೂರ ಕಲಿಕೆ ಕಾರ್ಯಕ್ರಮಗಳನ್ನು [distance learning programme] ಸಂಸ್ಥೆಯಿಂದ ಜಾರಿಗೆ ತಂದಿದ್ದಾರೆ. ಇದರಿಂದ ಬ್ಯಾಂಕಿನ ಪ್ರತಿಯೊಬ್ಬ ವ್ಯಕ್ತಿಯೂ ತರಬೇತಿಯಲ್ಲಿ ಪಾಲ್ಗೊಳ್ಳಲು ಸಾಧ್ಯ ವಿದೆ. ಇದರಿಂದ ಗ್ರಾಹಕ ಸೇವೆಯನ್ನು ಇನ್ನೂ ಹೆಚ್ಚು ಸಮರ್ಪಕವಾಗಿ ಪೂರೈಸಬಹುದು.

**ಸಮಾನತೆ, ಪ್ರೋತ್ಸಾಹ**

ಈ ಬ್ಯಾಂಕ್ ಕೆಲಸ ನಮ್ಮ ಅನಿಸಿಕೆಗಳ ಪ್ರಕಟಣೆಗೆ ಅವಕಾಶ ಕೊಡುವುದಿಲ್ಲ. ಅಂಕಿ ಗಳೊಂದಿಗೆ ಸೆಣಸಾಟ ನಡೆಸಿ, ತೌಲನಿಕ ರೀತಿಯಲ್ಲಿ ಅವುಗಳನ್ನು ಹೊಂದಿಸುವುದು, ಗ್ರಾಹಕನ ವಹಿವಾಟುಗಳತ್ತ ಗಮನ ಹರಿಸುವುದು, ಇವುಗಳಲ್ಲಿ ನಾವು ತೃಪ್ತಿ ಹೊಂದಬೇಕು.ನಮ್ಮಲ್ಲಿರುವ ಭಾವನೆ ಗಳು ಸುಪ್ತವಾಗಿಯೇ ಉಳಿಯುತ್ತವೆ. ಅಂದಿನ ಕೆಲರೀತಿಯ ಕೆಲಸಗಳನ್ನು ಅಂದೇ ಮುಗಿಸಬೇಕಾದ್ದ ರಿಂದ, ನಿಗದಿತ ವೇಳೆಯಲ್ಲಿ ಸಾಧ್ಯವಾಗದಿದ್ದರೆ, ಹೆಚ್ಚು ಸಮಯ ಕೆಲಸ ಮಾಡಬೇಕಾಗುತ್ತದೆ. ಇದಕ್ಕೆನೌಕರನು ತಯಾರಿರಬೇಕು. ಇದರಲ್ಲಿ ಕೆಲವು ಸಮಸ್ಯೆಗಳಿಗೆ ಅಧೀನ ನೌಕರರೂ ಹೊರತಾಗಿಲ್ಲ. ಆದುದರಿಂದ ಅವರನ್ನೂ ಸರಿಸಮಾನರನ್ನಾಗಿ ಗುರುತಿಸಬೇಕು. ಅವರುಗಳಿಗೂ ಪ್ರೋತ್ಸಾಹ ಹಾಗೂ ತರಬೇತಿಯ ಆವಶ್ಯಕತೆಯಿದೆ.

ಇವೆಲ್ಲಾ ಅಸಮಾಧಾನಗಳಿಗೆ ಉತ್ತರವಾಗಿ, ಉತ್ತಮ ವೇತನ ಹಾಗೂ ಸುರಕ್ಷಿತ ವೃತ್ತಿ ವ್ಯವಸ್ಥೆ ಯಿದೆ. ತನ್ನ ಕೆಲಸಕಾರ್ಯಗಳಿಗೆ ಅನುಗುಣವಾಗಿ ವೇತನ ತೃಪ್ತಿ ಸಿಗುತ್ತದೆ. ಜೊತೆಗೆ ರಜಾ ಸೌಲಭ್ಯ ಗಳು, ಭತ್ಯ ಸೌಕರ್ಯಗಳು, ಹೆಚ್ಚುವರಿ ಭತ್ಯಗಳು ದೊರೆಯುತ್ತವೆ.

ಹೀಗೆ ಅನೇಕ ಸಮಸ್ಯೆಗಳಿದ್ದರೂ, ಅದಕ್ಕೆ ಪರಿಹಾರಗಳನ್ನೂ ಪಡೆಯುತ್ತಾ, ಈ ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಾವು ರಾಷ್ಟ್ರದ ಉನ್ನತಿಗಾಗಿ ದುಡಿ ಯುವ ಸಮೃದ್ಧ ಸಂಪನ್ಮೂಲವಾಗಿದ್ದೇವೆ. ●

# ಸಾವಧಿ ಠೇವಣಿ ಮೇಲಣ ಸಾಲ

**ಮಾಡಿದ ಖರ್ಚು, ಗಳಿಸಿದ ಆದಾಯ—ಇವೆರಡರ ಅಂತರವೇ ಉದ್ಯಮದ ಲಾಭ. ಪಡೆದ ಹಣಕ್ಕೆ ಕೊಡುವ ಬಡ್ಡಿ, ನೀಡಿದ ಸಾಲಕ್ಕೆ ಪಡೆಯುವ ಬಡ್ಡಿ ಇವೆರಡರ ಅಂತರದಿಂದ ತನ್ನ ಖರ್ಚುಗಳನ್ನು ಕಳೆದರೆ ಉಳಿಯುವುದು ಬ್ಯಾಂಕರನ ಲಾಭ. ಇವೆರಡೂ ಬಡ್ಡಿಗಳು ಪರಸ್ಪರ ಸಂಧಿಸದಂತೆ ಅವನು ವ್ಯರ್ಥಸಾಹಸದಲ್ಲಿ ತೊಡಗಿದ್ದಾನೆಯೆ? ಹೆಚ್ಚು ಬಡ್ಡಿ ತರುವ ಸಾವಧಿ ಠೇವಣಿಯ ಹಣ ವಾಪಸು ಬೇಕೆಂದು ಠೇವಣಿದಾರ ಕೇಳಿದಾಗ, ಅಥವಾ ಅದರ ಮೇಲೆ ಸಾಲ ಬೇಕೆಂದಾಗ ಬ್ಯಾಂಕರ್ ಏನು ಮಾಡಬೇಕು?**

**ಶ್ರೀನಿವಾಸ ಗಟ್ಟಿ**
ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್
ಮುಖ್ಯ ಶಾಖೆ
ಎಂ. ಜಿ. ರಸ್ತೆ, ರಾಯಚೂರು

ಈಚೆಗೆ ನಮ್ಮ ಬ್ಯಾಂಕಿನಲ್ಲಿ ನಡೆದ ಗ್ರಾಹಕರ ಸಮಾವೇಶದಲ್ಲಿ ಒಂದು ವಿಷಯ ತೀವ್ರ ಚರ್ಚೆಗೆ ಒಳಗಾಯಿತು. ಗ್ರಾಹಕರೊಬ್ಬರು ಆ ಬಗ್ಗೆ ತಳೆದಿದ್ದ ಅಸಹನೆಯ ಧೋರಣೆ ಅವರ ಮಾತುಗಳಲ್ಲಿ ಪ್ರಬಲವಾಗಿ ವ್ಯಕ್ತಪಟ್ಟಿತ್ತು. ಗ್ರಾಹಕರಿಂದ ಸಾವಧಿ ಠೇವಣಿ ಸ್ವೀಕರಿಸುವ ಬ್ಯಾಂಕುಗಳು,ಅವಸರಬಿದ್ದಾಗ ಅದೇ ಠೇವಣಿಯ ಆಧಾರದ ಮೇಲೆ ಗ್ರಾಹಕರಿಗೆ ನೀಡುವ 'ತಗಾದೆ ಸಾಲ'ಗಳ ಸಂಬಂಧದ ಬಡ್ಡಿಯ ವಿಷಯ ಈ ಚರ್ಚೆಯ ವಸ್ತು. ಮೇಲೆ ತಿಳಿಸಿದ ಗ್ರಾಹಕರು ತಮ್ಮ ಪ್ರಖರವಾದ ಮಾತುಗಳಲ್ಲಿ ಬ್ಯಾಂಕಿನ ಹಿರಿಯ ಅಧಿಕಾರಿಗಳನ್ನು ಹೀಗೆ ಪ್ರಶ್ನಿಸಲು ತೊಡಗಿದ್ದರು.

"ನಮ್ಮ ದುಡ್ಡು ತಗೊಂಡು ನಮಗೇ ಹೆಚ್ಚು ಬಡ್ಡಿ ಹಾಕ್ತೀರಲ್ರೀ ?"

ಇದು ಯಾವುದೇ ಗ್ರಾಹಕನೊಬ್ಬನ ದೂರಲ್ಲ. ಸರ್ವೇಸಾಮಾನ್ಯವಾಗಿ ಬ್ಯಾಂಕರನ ಜೊತೆ ಬಹಳಷ್ಟು ಜನ ಗ್ರಾಹಕರು ಈ ಸಂಬಂಧದಲ್ಲಿ ವಾದಕ್ಕಿಳಿಯುವುದುಂಟು. ಗ್ರಾಹಕರಿಗೆ ತಗಾದೆ ಸಾಲಗಳನ್ನು ಹಲವಾರು ಸಂದರ್ಭಗಳಲ್ಲಿ ನೀಡ ಲಾಗುತ್ತಿದೆ. ಅವಸರಕ್ಕೆ ತಕ್ಕಂತೆ ಸಾವಧಿ ಠೇವಣಿ ಗಳ ಮೇಲೆ, ಗೋದಾಮುಗಳ ದಾಸ್ತಾನಿನ ಮೇಲೆ, ಪುನರಾವರ್ತಕ ಠೇವಣಿಗಳ ಮೇಲೆ ಇತ್ಯಾದಿ.

ಸಾವಧಿ ಠೇವಣಿಯೊಂದಕ್ಕೆ ವಾರ್ಷಿಕ ಶೇಕಡಾ ೧೦ಕ್ಕೂ ಹೆಚ್ಚು ಬಡ್ಡಿಯನ್ನು ಬ್ಯಾಂಕರನು ನೀಡು ತ್ತಿರಬೇಕಾದರೆ, ಅದೇ ಠೇವಣಿಸಂಬಂಧದ ತಗಾದೆ ಸಾಲಕ್ಕೆ ವಾರ್ಷಿಕ ಶೇಕಡಾ ೨ರಷ್ಟು ಹೆಚ್ಚಿನ ಬಡ್ಡಿ ಯನ್ನುಗ್ರಾಹಕರಿಂದ ಪಡೆಯಲಾಗುತ್ತಿದೆ.ಬಡ್ಡಿಯ ದರದಲ್ಲಿನಕೊಡುಕೊಳ್ಳುವಿಕೆಯಅಂತರದಆಧಾರದ ಮೇಲೆಯೇ ಬ್ಯಾಂಕುಗಳು ಕಾರ್ಯನಿರ್ವಹಿಸು ತ್ತಿರುವುದು ಸರ್ವಗ್ರಾಹ್ಯಸಂಗತಿ. ಇನ್ನು ಬಡ್ಡಿಯ ದರಗಳನ್ನು ನಿಷ್ಕರ್ಷೆ ಮಾಡುವ ಅಧಿಕಾರ ಕೂಡ ರಾಷ್ಟ್ರೀಕೃತ ಬ್ಯಾಂಕುಗಳಿಗೆ ಇಲ್ಲ. ಅವುಗಳ ಕೆಲಸ ಏನಿದ್ದರೂ, ಕೇಂದ್ರ ಬ್ಯಾಂಕಿನ (ಭಾರತೀಯ ರಿಸರ್ವ್ ಬ್ಯಾಂಕ್) ಆದೇಶಗಳಿಗೆ ಅನುಗುಣವಾಗಿ ವರ್ತಿಸುವುದು.

ಬ್ಯಾಂಕುಗಳು ಗ್ರಾಹಕನಿಂದಲೇ ದುಡ್ಡನ್ನು ಸಾವಧಿ ಠೇವಣಿಯಾಗಿ ಪಡೆದು, ಅದನ್ನು ಅವನಿಗೇ ಸಾಲವಾಗಿ ಕೊಟ್ಟು, ಅವನಿಂದಲೇ ವಾರ್ಷಿಕ ಶೇಕಡಾ ಎರಡು ಹೆಚ್ಚು ಬಡ್ಡಿಯನ್ನು ವಸೂಲಿ ಮಾಡುತ್ತವೆ ಎಂಬುದು ಮೇಲ್ನೋಟದ ಗ್ರಾಹಕರ ವಾದಾಂಶ ಮೂಲ. ಇಲ್ಲಿನ ಸ್ವಾರಸ್ಯಕರ ಅಂಶ ವೇನೆಂದರೆ, ಸಾಮಾನ್ಯವಾಗಿ ಕೃಷಿ ಸಾಲವೋ, ನಗದು ಋಣವೋ ಅಥವಾ ಇನ್ನಾವುದೇ ಸರ್ಕಾರಿ ಯೋಜನೆಯ ಸಾಲವೋ ಆಗಿದ್ದಲ್ಲಿ, ಗ್ರಾಹಕರ ಬ್ಯಾಂಕಿನ ಬಡ್ಡಿನೀತಿಯನ್ನು ಅಷ್ಟಾಗಿ ಪ್ರಶ್ನಿಸಲು ಹೋಗುವುದಿಲ್ಲ! ಆದರೆ ಫಜೀತಿ ಬರುವುದು ಅವರ ಸಾವಧಿ ಠೇವಣಿಯ ಮೇಲೆ ಅವರಿಗೇ ಸಾಲ ಕೊಡಲು ಹೋದಾಗ ಮಾತ್ರ!

ಬ್ಯಾಂಕುಗಳು ಈ ವಿಧಾನವನ್ನು ಏಕೆ ಅನುಸರಿಸ ಬೇಕಾಗುತ್ತದೆ ಎಂಬುದನ್ನು ಗ್ರಾಹಕರಿಗೆ ಚೆನ್ನಾಗಿ ಮನನ ಮಾಡಿಸುವ ಅಗತ್ಯವನ್ನು ಬ್ಯಾಂಕರು ಮನಗಾಣಬೇಕಿದೆ.

## ನಿಧಿನಿರ್ವಹಣಾ ವಿಧಾನ

ಬ್ಯಾಂಕುಗಳು ಗ್ರಾಹಕರಿಂದ ಪಡೆಯುವ ಠೇವಣಿಯ ಹಣವನ್ನು ತಮ್ಮಲ್ಲೇ ಇಟ್ಟುಕೊಳ್ಳುವುದಿಲ್ಲ. ಈ ಸಂಬಂಧ ಸೂತ್ರಬದ್ಧ ನಿಯಮಾವಳಿಗಳನ್ನು ಭಾರತೀಯ ರಿಸರ್ವ್ ಬ್ಯಾಂಕ್ ರೂಪಿಸಿದ್ದು ಅವನ್ನು ನಮ್ಮ ಎಲ್ಲ ವಾಣಿಜ್ಯ ಬ್ಯಾಂಕುಗಳೂ ಪಾಲಿಸುತ್ತಲಿವೆ. ಆಯಾ ಬ್ಯಾಂಕುಗಳು ತಮ್ಮ ಠೇವಣಿಯ ಒಟ್ಟು ಮೊತ್ತದಲ್ಲಿ ನಗದಾಗಿ ಮತ್ತು ಸರ್ಕಾರಿ ಪ್ರತಿಭೂತಿಗಳ ರೂಪದಲ್ಲಿ ಅನುಪಾತದಲ್ಲಿ ಅರ್ಧಕ್ಕೂ ಹೆಚ್ಚು ಹಣವನ್ನು ಇಡಬೇಕು. ಉಳಿದದ್ದನ್ನು ಮಾತ್ರ ತಮ್ಮ ಉದರನಿರ್ವಹಣೆಗೆ ಬ್ಯಾಂಕುಗಳು ಬಳಸುತ್ತಲಿವೆ. ಅವಕ್ಕೆ ನಿಜಾರ್ಥದಲ್ಲಿ ಲಭ್ಯವಿರುವ ನಿಧಿಗಳ ಪ್ರಮಾಣ ಇಷ್ಟು ಮಾತ್ರ.

ಗ್ರಾಹಕನೊಬ್ಬ ಒಂದು ಪಕ್ಷ ಮೂರು ವರ್ಷಗಳ ಅವಧಿಗೆ ಸಾವಧಿ ಠೇವಣಿಯೊಂದನ್ನು ಬ್ಯಾಂಕಿನಲ್ಲಿ ತೆರೆದನೆಂದಾದರೆ, ಆ ಮೂರು ವರ್ಷಗಳತನಕವೂ ಆತ ಆ ದುಡ್ಡಿಗೆ ಮತ್ತೆ ಬೇಡಿಕೆ ಸಲ್ಲಿಸಲಾರ ಎಂದೇ ಅರ್ಥ. ಅದನ್ನು ಮೀರಿಯೂ ಗ್ರಾಹಕ ಮಧ್ಯಂತರದಲ್ಲಿ ಸಾಲದ ಬೇಡಿಕೆ ಸಲ್ಲಿಸಿದ ಪಕ್ಷದಲ್ಲಿ ಬ್ಯಾಂಕುಗಳ ಲಭ್ಯನಿಧಿಗಳ ಮೇಲೆ ಅನಗತ್ಯವಾದ ಒತ್ತಡ ಬೀಳುತ್ತದೆ. ಅದರ ಜೊತೆಜೊತೆಗೇನೆ ಸಿಬ್ಬಂದಿ ವೇತನ ವ್ಯವಸ್ಥೆ, ಲೇಖನ ಸಾಮಗ್ರಿ ಮುಂತಾದ 'ನಿಧಿಗಳ ವೆಚ್ಚ'ದ ನಿರ್ವಹಣೆಯ ಅಂಶವೂ ಇಲ್ಲಿ ಪರಿಗಣಿತವಾಗುತ್ತದೆ.

ಈ ಎಲ್ಲ ಕಾರಣಗಳ ಹಿನ್ನೆಲೆಯಲ್ಲಿ ತಗಾದೆ ಸಾಲಗಳಿಗೆ ಇಂತಿಷ್ಟು ಅಂತ (ಠೇವಣಿಗಳಿಗೆ ತಾನು ನೀಡುವ ಬಡ್ಡಿಗಿಂತ ಶೇಕಡಾ ಎರಡು ಅಧಿಕ) ಬಡ್ಡಿಯನ್ನು ಭಾರತೀಯ ರಿಸರ್ವ್ ಬ್ಯಾಂಕ್ ದೇಶದ ಎಲ್ಲ ಬ್ಯಾಂಕುಗಳಿಗೆ ಅನ್ವಯಿಸುವಂತೆ ನಿಗದಿ ಮಾಡಿದೆ. ಹೀಗಾಗಿ ಇದು ಗ್ರಾಹಕರಿಂದ ಅನುಚಿತ ರೀತಿಯಲ್ಲಿ ಬಡ್ಡಿ ಪಡೆಯುವ ಕ್ರಮ ಖಂಡಿತವಾಗಿಯೂ ಅಲ್ಲ. ಒಂದು ವಿಧದಲ್ಲಿ ಇದು ಅತ್ಯಂತ ಸಮತೋಲದ ಗುಣವನ್ನು ಹೊಂದಿದೆ ಎನ್ನಬಹುದು. ಅತ್ತ ಗ್ರಾಹಕರಿಗೂ ಹೆಚ್ಚು ಹೊರೆಯಾಗದ ಹಾಗೆ, ಇತ್ತ ಬ್ಯಾಂಕುಗಳಿಗೂ ನಷ್ಟದ ರೇಖೆಯ ಕೆಳಗೆ ಜಾರದಂತೆ ಎಚ್ಚರ ವಹಿಸಿ ಇದನ್ನು ರೂಪಿಸಲಾಗಿದೆ.

## ಸುಲಭ ದ್ರವತ್ವ

ಸುಲಭ ದ್ರವತ್ವ ಸಾವಧಿ ಠೇವಣಿಗಳ ಅತ್ಯಂತ ಪ್ರಮುಖವಾದ ಗುಣಲಕ್ಷಣ. ಬೇಡವೆಂದರೆ ನಿಶ್ಚಿತ ಅವಧಿಗೆ ಮುನ್ನವೇ ಖಾತೆ ನಿಲ್ಲಿಸಿ, ದುಡ್ಡು ವಾಪಸ್ ಪಡೆಯಬಹುದು. ಇಲ್ಲವೇ ಅದರ ಆಧಾರದ ಮೇಲೆ ತಕ್ಷಣವೇ ತಗಾದೆ ಸಾಲ ಪಡೆಯಬಹುದು. ಈ ಸುಲಭ ದ್ರವತ್ವ ಗುಣದಿಂದಲೇ ಇಂದು ಬ್ಯಾಂಕ್ ಠೇವಣಿಗಳು ಹೆಚ್ಚು ಜನಪ್ರಿಯತೆಯನ್ನು ಪಡೆದಿವೆ ಎಂಬುದನ್ನು ಅಲ್ಲಗಳೆಯಲಾಗದು.

ದ್ರವತ್ವ ಇಲ್ಲದ ಎಷ್ಟೋ ಬ್ಯಾಂಕೇತರ ಯೋಜನೆಗಳು ಇಂದು ನಮ್ಮಲ್ಲಿವೆ. ಅವಧಿ ಪೂರ್ಣಗೊಳ್ಳುವ ತನಕ ಅಲ್ಲಿಯ ದುಡ್ಡು ಗ್ರಾಹಕನ ಪಾಲಿಗೆ ಕನಸಿನ ಗಂಟಾಗಿಯೇ ಉಳಿಯುವುದನ್ನು ಕಾಣುತ್ತೇವೆ. ತೀರಾ ಅತ್ಯವಸರದ ಪರಿಸ್ಥಿತಿಯಲ್ಲಿ ಠೇವಣಿಯನ್ನು ನಗದೀಕರಿಸಿಕೊಳ್ಳುವುದು ದುಬಾರಿಯಾಗುತ್ತದೆ. ಅನ್ಯ ಇಲಾಖೆಯ ಇಂಥ ಠೇವಣಿಗಳ ಮೇಲಿನ ಸಾಲಕ್ಕೆ ಮತ್ತೆ ಬ್ಯಾಂಕುಗಳನ್ನೇ ಆಶ್ರಯಿಸುವ ಸ್ವಾರಸ್ಯಕರ ಪ್ರಸಂಗಗಳನ್ನು ನಾವು ಕಾಣುತ್ತೇವೆ. ಇಷ್ಟೆಲ್ಲ ಪಡಿಪಾಟಲು ಕಾಣದ ಗ್ರಾಹಕರು ಕೆಲವೊಮ್ಮೆ ತಮ್ಮ 'ಕನಸಿನ ಗಂಟ'ನ್ನು ಅದರ ಮುಖ ಬೆಲೆಗಿಂತ ಕಡಿಮೆ ದರದಲ್ಲಿ ದಲ್ಲಾಳಿಗಳಿಗೆ ಮಾರಿ ದುಡ್ಡು ಪಡೆಯುವ ಉದಾಹರಣೆಗಳು ಅದೆಷ್ಟೋ. ಆದರೆ ಬ್ಯಾಂಕಿನ ಒಂದು ಸಾವಧಿ ಠೇವಣಿಯ ರಸೀದಿಯನ್ನು ದಲ್ಲಾಳಿಗಳಿಗೆ ಮಾರಿದಂಥ ಒಂದೇ ಒಂದು ಉದಾಹರಣೆ ಕೂಡ ನಮಗೆ ಖಂಡಿತ ಸಿಗಲಾರದು. ಏಕೆಂದರೆ ರಸೀದಿ ಹಿಡಿದು ನೇರವಾಗಿ ಬ್ಯಾಂಕಿಗೆ ನಡೆದರೆ ತಕ್ಷಣ ಕೈಗೆ ದುಡ್ಡು ಲಭ್ಯ.

ಇಷ್ಟೆಲ್ಲ ಗುಣಾತ್ಮಕ ಅಂಶಗಳ ಲಾಭ ಪಡೆವ ಗ್ರಾಹಕ, ಇದಕ್ಕೆ ಪ್ರತಿಯಾಗಿ ಈಗ ತೆರುತ್ತಿರುವ ಬಡ್ಡಿ ತೀರಾ ಅತ್ಯಲ್ಪವೆಂದೇ ಹೇಳಬೇಕು. ಗ್ರಾಹಕ ಕೆಳಗಿನ ಸಂಗತಿಗಳನ್ನು ಪರಿಗಣಿಸಿಕೊಂಡಲ್ಲಿ ತಾನು ಬ್ಯಾಂಕಿಗೆ ಸಂದಾಯ ಮಾಡುತ್ತಿರುವ ಬಡ್ಡಿ ಎಷ್ಟು ಮೌಲಿಕವಾದುದು ಮತ್ತು ಸಮರ್ಪಕವಾದುದು ಎಂದು ಮನದಟ್ಟಾಗುತ್ತದೆ.

1 ಗ್ರಾಹಕರು ತಮ್ಮ ಅತ್ಯವಸರದ ಬೇಡಿಕೆಗಳನ್ನು ತಾತ್ಕಾಲಿಕವಾಗಿ ಪೂರೈಸಿಕೊಳ್ಳಲು ಮಾತ್ರ ತಗಾದೆ ಸಾಲಗಳ ಮೊರೆ ಹೋಗಬೇಕು.

2 ಠೇವಣಿಯ ಅವಧಿ ಎಷ್ಟೇ ದೀರ್ಘವಾಗಿರಲಿ, ತಗಾದೆ ಸಾಲಗಳನ್ನು ತ್ವರಿತಗತಿಯಲ್ಲಿ ಮರುಪಾವತಿ ಮಾಡುವ ಬಗ್ಗೆ ಗ್ರಾಹಕರು ನಿಷ್ಠರಾಗಿರಬೇಕು.

3 ಸಾಲ ಸ್ವಲ್ಪೇ ಅವಧಿಯಲ್ಲಿ ಮರುಪಾವತಿಯಾದ ಅನಂತರ ಗ್ರಾಹಕನ ಸಾವಧಿ ಠೇವಣಿಯ ಮೂಲ ಮೊತ್ತ ಮತ್ತೆ ಮಾಮೂಲಿನಂತೆ ಭದ್ರವಾಗಿಯೇ ಇರುತ್ತದೆ! ಇದರಿಂದ ಅವರಿಗೆ ಬ್ಯಾಂಕಿನಿಂದ ಸಿಗುವ ಠೇವಣಿಯ ಮೇಲಣ ಬಡ್ಡಿಯಲ್ಲಿ ಹೆಚ್ಚು ನಷ್ಟ ಸಂಭವಿಸುವುದಿಲ್ಲ. ಜೊತೆಗೆ ತಮ್ಮ ಸಾಲದ ಮೇಲೆ ಬ್ಯಾಂಕಿಗೆ ನೀಡಬೇಕಾದ ಬಡ್ಡಿಯ ಪ್ರಮಾಣ ಕೂಡ ಅಷ್ಟು ಅಧಿಕ ಮೊತ್ತದ್ದೇನೂ ಆಗಿರುವುದಿಲ್ಲ.

4 ಒಂದು ಪಕ್ಷ ಗ್ರಾಹಕರಿಗೆ ಸಾಲ ಮರುಪಾವತಿ ಮಾಡಲು ತಡವಾಗಿ, ಅದು ಠೇವಣಿಯ ಪರಿಪಕ್ವತಾ ದಿನಾಂಕದವರೆಗೂ ಮುಂದುವರಿದರೆ ಆಗಲೂ ಅವರಿಗೆ ಸಂಭವಿಸಬಹುದಾದ ನಷ್ಟ ಅಥವಾ ಬಡ್ಡಿಯ ಹೊರೆ ನಗಣ್ಯವಾದದ್ದು.

5 ಕೆಲವಾದರೂ ಪ್ರಸಂಗಗಳಲ್ಲಿ ಗ್ರಾಹಕರು ಇಂಥ ಅನಪೇಕ್ಷಿತ ನಷ್ಟಕ್ಕೆ ಈಡಾಗಬಾರದು ಎಂಬ ಉದ್ದೇಶದಿಂದಲೇ ಅವರಿಗೆ ಸಾಲ ಕೊಡುವಾಗ, ಸಾವಧಿ ಠೇವಣಿಯ ಮೊತ್ತದ ಮುಕ್ಕಾಲು ಭಾಗ ಮಾತ್ರ ಸಾಲವಾಗಿ ನೀಡಲಾಗುತ್ತಿದೆ. ಸಾಲದ ಬಡ್ಡಿಯ ಮೊತ್ತ ಅವರ ಠೇವಣಿಯ ಗಳಿಕೆಯ ಮೊತ್ತವನ್ನು ನುಂಗಿಬಿಡಬಾರದು ಎಂಬ ಸದುದ್ದೇಶ ಇಲ್ಲಿರುವುದನ್ನು ಗಮನಿಸಬೇಕು.

ಒಟ್ಟಿನಲ್ಲಿ ಗ್ರಾಹಕರಲ್ಲಿ 'ಋಣಶಿಸ್ತು' ಬೆಳೆಸಲು ಈ ವಿಧಾನ ತುಂಬಾ ಉಪಯುಕ್ತವಾಗಿದೆ. ಸಾವಧಿ ಠೇವಣಿಯ ಬಡ್ಡಿ ಮತ್ತು ಅದರ ಸಾಲದ ಬಡ್ಡಿಯ ನಡುವೆ ಯಾವುದೇ ಅಂತರ ಇಲ್ಲದೇ ಹೋಗಿದ್ದರೆ ಪ್ರತಿಯೊಂದು ಸಾವಧಿ ಠೇವಣಿಯ ಮೇಲೂ ಒಂದೊಂದು ತಗಾದೆಸಾಲ ತಪ್ಪದೇ ಇರುತ್ತಿತ್ತು! ನಿಶ್ಚಿತ ಅವಧಿ ಪೂರ್ಣಗೊಂಡ ದಿನ ಠೇವಣಿದಾರನ "ದೊಡ್ಡ ಮೊತ್ತದ ಕನಸು" ಇದರಿಂದ ನುಚ್ಚುನೂರಾಗಿ, ಬ್ಯಾಂಕುಗಳಲ್ಲಿ ಠೇವಣಿ ಇಡುವ ಪರಿಪಾಠವೇ ತನ್ನ ಅರ್ಥವನ್ನು ಕಳೆದುಕೊಂಡಿರುತ್ತಿತ್ತು. ●

---

'ಬ್ಯಾಂಕಿಂಗ್ ಪ್ರಪಂಚ'ದ ಚಂದಾದಾರರು ತಮ್ಮ ವಿಳಾಸದಲ್ಲಿ ಆಗುವ ಬದಲಾವಣೆಗಳನ್ನು ಕೂಡಲೇ ತಿಳಿಸಬೇಕು.

ಪ್ರಧಾನ ಕಾರ್ಯದರ್ಶಿ
**ಸಮನ್ವಯ ಸಮಿತಿ**
ಭಾರತೀಯ ಸ್ಟೇಟ್ ಬ್ಯಾಂಕ್, ನಗರ ಶಾಖೆ
೨೨, ಜಯಚಾಮರಾಜ ರಸ್ತೆ, ಬೆಂಗಳೂರು ೫೬೦೦೦೨

---

# ಕೇಂದ್ರ ಬ್ಯಾಂಕಿನ ಸ್ವಾತಂತ್ರ್ಯ*

## ಹಣದುಬ್ಬರದ ಸಮರ್ಪಕ ನಿರ್ವಹಣೆಗೆ ಅದು ಕೊಡುಗೆ ನೀಡಬಲ್ಲುದೆ?

### ಸಿದ್ಧಾಂತ ಮತ್ತು ಪ್ರಯೋಗ ಕುರಿತ ಅಂಶಗಳು

---

ಮೂಲ: **ಮಾರ್ಟ ಕ್ಯಾಸ್ಟೆಲೋ–ಬ್ರಾಂಕೋ ಮತ್ತು ಮಾರ್ಕ್‌ಸ್ವಿನ್‌ಬರ್ನ್**

ಅನುವಾದ : **ಅ. ಚ ಅಶೋಕ ಕುಮಾರ್**, ಕನ್ನಡ ಅಧಿಕಾರಿ, ಮೈಸೂರು ಬ್ಯಾಂಕು, ವಲಯ ಕಛೇರಿ, ಮೈಸೂರು-೨೪ ; **ಹೆಚ್. ಸತ್ಯನಾರಾಯಣ,** ಅಭಿವೃದ್ಧಿ ಅಧಿಕಾರಿ, ಮೈಸೂರು ಬ್ಯಾಂಕು ವಲಯ ಕಛೇರಿ, ಮೈಸೂರು-೨೪ : **ಶಂಕರ್,** ಮೈಸೂರು ಬ್ಯಾಂಕು, ವಲಯ ಕಛೇರಿ, ಮೈಸೂರು-೨೪ ; **ವಿಜಯಲಕ್ಷ್ಮಿ,** ಮೈಸೂರು ಬ್ಯಾಂಕು, ಮಂಡ್ಯ-೫೭೧೪೦೧ ; **ರತ್ನ, ಸಿ. ಎನ್.,** ಮೈಸೂರು ಬ್ಯಾಂಕು, ಕೋಟೆ ಶಾಖೆ, ಬೆಂಗಳೂರು ; **ವಿ. ಎಸ್. ಶಿವರುದ್ರಪ್ಪ,** ಮೈಸೂರು ಬ್ಯಾಂಕು, ಬೆಂಗಳೂರು ಶಾಖೆ-೫೬೦೦೦೨ ; **ಧನಂಜಯ ಭೆಂಡಿ,** ಭಾರತೀಯ ಸ್ಟೇಟ್ ಬ್ಯಾಂಕ್, ನಗರ ಶಾಖೆ, ಬೆಂಗಳೂರು-೫೬೦೦೦೨ ; **ಕಾಂತಿಲಕ್ಷ್ಮಿ ಜಿ. ಕೆ. ಭಟ್,** ಭಾರತೀಯ ಸ್ಟೇಟ್ ಬ್ಯಾಂಕ್, ಹಾವೇರಿ-೫೮೧೧೧೦ : **ನರಸಿಂಹಮೂರ್ತಿ ಬಿ. ಎನ್.,** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್ ಬೆಂಗಳೂರು ಶಾಖೆ-೫೬೦೦೦೧ : **ಹೆಚ್. ಎಸ್. ಅನ್ನಪೂರ್ಣ,** ಭಾರತೀಯ ಸ್ಟೇಟ್ ಬ್ಯಾಂಕ್, ಸಣ್ಣ ಕೈಗಾರಿಕೆ ಶಾಖೆ, ಮೈಸೂರು-೨೦ ; **ರಂಗನಾಥ್,** ಭಾರತೀಯ ಸ್ಟೇಟ್ ಬ್ಯಾಂಕ್, ಮಂಡ್ಯ : **ರವೀಂದ್ರ ಬಾಳೀಹಳ್ಳಿ,** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕು, ನಗರ ಶಾಖೆ, ಬೆಂಗಳೂರು : **ಪಾ. ರಾಜಗೋಪಾಲ,** ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ: **ಬೆಂ. ಶ್ರೀ. ರವೀಂದ್ರ,** ಉಪಾಧ್ಯಕ್ಷ, ಸಮನ್ವಯ ಸಮಿತಿ ; **ಎಂ. ಎನ್. ದೇವರಾಯ** ಕಛೇರಿ ಕಾರ್ಯದರ್ಶಿ, ಸಮನ್ವಯ ಸಮಿತಿ ; **ಬಿ. ಎಸ್. ಚಂದ್ರಶೇಖರ,** ಉಪಾಧ್ಯಕ್ಷ, ಸಮನ್ವಯ ಸಮಿತಿ.

---

ಹಣನೀತಿಯ ರೂಪಣೆಯಲ್ಲಿ ಕೇಂದ್ರ ಬ್ಯಾಂಕುಗಳ ಸ್ವಾತಂತ್ರ್ಯವನ್ನು ಹೆಚ್ಚಿಸುವ ವಿಚಾರದಲ್ಲಿ ಈಚಿನ ದಿನಗಳಲ್ಲಿ ತಕ್ಕಷ್ಟು ಆಸಕ್ತಿ ಉಂಟಾಗಿದೆ. ಚಿಲಿ ಹಾಗೂ ನ್ಯೂ ಜಿಲೆಂಡ್ ದೇಶಗಳು ೧೯೮೯ರಲ್ಲಿ ಈ ನಿಟ್ಟನಲ್ಲಿ ಹೊಸ ಶಾಸನವನ್ನು ಜಾರಿಗೆ ತಂದಿವೆ. ಮತ್ತು ಲ್ಯಾಟಿನ್ ಅಮೇರಿಕ ಹಾಗೂ ಪೂರ್ವ ಯುರೋಪಿನ ಇತರ ಹಲವು ದೇಶಗಳು ಇಂಥವೇ ಉದ್ದೇಶದಿಂದ ನಿರ್ದಿಷ್ಟವಾದ ಪ್ರಸ್ತಾವಗಳನ್ನು ಅಧ್ಯಯನಮಾಡುತ್ತಿವೆ. ಹಲವು ಪ್ರಮುಖ ಕೈಗಾರಿಕಾ ದೇಶಗಳಲ್ಲಿ ಕೇಂದ್ರ ಬ್ಯಾಂಕ್ ಸ್ವಾಯತ್ತತೆಯನ್ನು ಹೆಚ್ಚಿಸುವುದರ ಕುರಿತು ಸಾರ್ವಜನಿಕವಾಗಿ ಚರ್ಚೆ ನಡೆಯುತ್ತಿದೆ.ಅದರಲ್ಲೂ ಮುಖ್ಯವಾಗಿ ಸ್ವತಂತ್ರ ರಾಷ್ಟ್ರೀಯ ಕೇಂದ್ರ ಬ್ಯಾಂಕುಗಳ ಸ್ಥಾಪನೆಗೆ ಪೂರ್ವಪ್ರಯತ್ನ ಅಗತ್ಯವೆಂದು ಐರೋಪ್ಯ ಹಣ ವ್ಯವಸ್ಥೆಯ ಕೆಲವು ಸದಸ್ಯರು ಭಾವಿಸುವಂತೆ, ಸ್ವತಂತ್ರ ರಾಷ್ಟ್ರಾತೀತ ಕೇಂದ್ರ ಬ್ಯಾಂಕಿಂಗ್ ವ್ಯವಸ್ಥೆಯೊಂದರ ಬಗ್ಗೆ, ಐರೋಪ್ಯ ಹಣ ವ್ಯವಸ್ಥೆಯನ್ನು ಕುರಿತ ಪ್ರಯತ್ನಗಳ ಫಲವಾಗಿ ಪ್ರಸ್ತಾವಗಳು ಬಂದಿವೆ.

ಈ ಬೆಳವಣಿಗೆಯಿಂದ, ಸಹಜವಾಗಿಯೇ, ಸರಕಾರಗಳ ಮತ್ತು ಕೇಂದ್ರ ಬ್ಯಾಂಕುಗಳ ನಡುವೆ ಇರಬೇಕಾದ ಸಂಬಂಧದ ಬಗ್ಗೆ ಮುಖ್ಯ ಪ್ರಶ್ನೆಗಳು ಉದ್ಭವಿಸುತ್ತವೆ. ಸ್ವತಂತ್ರ ಕೇಂದ್ರ ಬ್ಯಾಂಕುಗಳು ಬೆಲೆ ಸ್ಥಿರತೆಯನ್ನು ಸ್ಥಾಪಿಸಬಹುದೆಂಬ ಪರಿಕಲ್ಪನಾತ್ಮಕವಾದ ಮತ್ತು ಸ್ವಲ್ಪಮಟ್ಟಿಗೆ ಅನುಭವಸಿದ್ಧವಾದ ಆಧಾರದ ಮೇಲೆ ಸಾಹಿತ್ಯಬೆಳೆದಿರುವುದನ್ನು ಕಳೆದ ಕೆಲವು ವರ್ಷಗಳು ಕಂಡಿವೆ. ಏನೇ ಇರಲಿ, ಈಅಭಿಪ್ರಾಯ ಸಾರ್ವತ್ರಿಕವೇನಲ್ಲ. ಅಲ್ಲದೆ ವಾಸ್ತವವಾಗಿ ಅಂಥ ಸ್ವಾತಂತ್ರ್ಯವನ್ನು ಸ್ಥಾಪಿಸುವುದನ್ನು ಕುರಿತಂತೆ ಇರುವ ಅಂಶಗಳಿಗೆ ಹೆಚ್ಚಿನ ಗಮನವನ್ನು ಕೊಟ್ಟಿಲ್ಲ. ಚಿಲಿ, ಫ್ರಾನ್ಸ್, ಜರ್ಮನಿ, ಜಪಾನ್, ನ್ಯೂ ಜೀಲೆಂಡ್, ಸ್ವಿಟ್ಜರ್‌ಲ್ಯಾಂಡ್, ಯುನೈಟೆಡ್ ಕಿಂಗ್‌ಡಮ್ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿಯ ವ್ಯವಸ್ಥೆಗಳ ಸವಿಸ್ತಾರವಾದ ಪರೀಕ್ಷೆಯ ಆಧಾರದ ಮೇಲೆ ಈ ಅಂಶಗಳನ್ನು ಲೇಖನ ಚರ್ಚಿಸುತ್ತದೆ.

### ಸ್ವಾತಂತ್ರ್ಯದ ಸಮರ್ಥನೆ

ದೀರ್ಘಕಾಲಿಕ ದೃಷ್ಟಿಯನ್ನು ತಳೆಯಬಲ್ಲ ರಾಜಕೀಯೇತರ ಅಧಿಕಾರಿಗಳು ನೀತಿನಿರೂಪಣೆಯನ್ನು ಮಾಡುವಂತಿದ್ದಿದ್ದರೆ ಹಣಕಾಸಿನ ವಿಶ್ವಾಸಾರ್ಹತೆ ಮತ್ತು ಅದರಿಂದಾಗಿ ಕನಿಷ್ಠ ಆರ್ಥಿಕ ವೆಚ್ಚದಲ್ಲಿ ಹೆಚ್ಚು ದೀರ್ಘಕಾಲಿಕ ಬೆಲೆ ಸ್ಥಿರತೆಯನ್ನು ಸಾಧಿಸಿ ನಿರ್ವಹಿಸುವುದು ಸಾಧ್ಯವಾಗುತ್ತದೆ ಎಂಬುದು 'ಕೇಂದ್ರ ಬ್ಯಾಂಕ್' ಸ್ವಾತಂತ್ರ್ಯದ ಪರವಾದ ವಾದವಾಗಿದೆ. ಹಣ ನೀತಿಯಲ್ಲಿರುವ "ಕಾಲದ ಅಸಾಂಗತ್ಯ"ವೆಂದು ಈ ದೃಷ್ಟಿಗೆ ಪರಿಕಲ್ಪನಾತ್ಮಕ ಆಧಾರವನ್ನು ಈಚೆಗೆ ರೂಪಿಸಲಾಗಿದೆ. ಚುನಾಯಿತ ನೀತಿರಚಕರು ತಮ್ಮ ಮುಂದೆ ಹಣದುಬ್ಬರ ಮತ್ತು ಉದ್ಯೋಗ ಅಥವಾ ಉತ್ಪನ್ನ, ಈ ಎರಡೂ ಉದ್ದೇಶಗಳನ್ನಿಟ್ಟುಕೊಂಡಿದ್ದರೆ, ಪೂರ್ವಘೋಷಿತ ಹಣದುಬ್ಬರ ರಹಿತ ಹಣನೀತಿಯನ್ನು ತ್ಯಜಿಸಿ ಅಲ್ಪಕಾಲಿಕ ಉತ್ಪತ್ತಿಯ ರೂಪದಲ್ಲಿ ಲಾಭವನ್ನು ಅರಸಲು ಅವರಿಗೆ ಉತ್ತೇಜನ ಇರುವುದೆಂದು ಸುಲಭವಾಗಿ ತೋರಿಸುವುದಾಗಿದೆ. ಹಣನೀತಿಯನ್ನು ಸಡಲಿಸುವಲ್ಲಿ ನೀತಿರಚಕರ ಉದ್ದೇಶ ವರಮಾನ ವಿತರಣೆ ಅಥವಾ ಆದಾಯದ ವಿಷಯಗಳಿಗೆ ಸಂಬಂಧಿಸಿದರೆ ಅಂಥವೇ ಸಮಸ್ಯೆಗಳು ಉದ್ಭವಿಸುತ್ತವೆ. ಈ ನೀತಿಯನ್ನು ತ್ಯಾಗ ಮಾಡುವುದರ ಹಿಂದೆ ಇರುವ ಪ್ರೇರಣೆಯನ್ನು ಸಾರ್ವಜನಿಕರು ಗುರುತಿಸುವರೆಂದು ಭಾವಿಸಿ, ಕೊಂಡಲ್ಲಿ, ಹಣದುಬ್ಬರರಹಿತ ನೀತಿಯ ನಿಲುವಿಗೆ ನೀತಿರಚಕರು ವಿಶ್ವಾಸಾರ್ಹವಾದ ರೀತಿಯಲ್ಲಿ ಪೂರ್ವಭಾವಿಯಾಗಿ ಬದ್ಧರಾಗಿರದಿದ್ದರೆ, ನೀತಿರಚಕರು ಬೆಲೆ ಸ್ಥಿರತೆ ಉದ್ದೇಶವನ್ನೇ ಸಾರ್ವಜನಿಕರು ನಂಬುವರೆಂಬ ಸಂದರ್ಭದೊಂದಿಗೆ ಹೋಲಿಸಿದಾಗ ನಾಮಕ ಬಡ್ಡಿದರಗಳು ಏರುತ್ತವೆ. ಹಣದುಬ್ಬರ ಕುರಿತ ನಿರೀಕ್ಷಣೆಗಳು ತೌಲನಿಕವಾಗಿ ಹೆಚ್ಚು ನಿಧಾನವಾಗಿ (ಅವು ಇಳಿಯುವುದೇ ಆದರೆ) ಇಳಿಯುತ್ತವೆ.

ಕಾಲದ ಅಸಾಂಗತ್ಯ ಸಮಸ್ಯೆಯನ್ನು ಕುರಿತಂತೆ ಸಾಧ್ಯವಿರುವ ಪರಿಣಾಮಗಳಿಗೂ, ನೀತಿರಚಕರು ಸ್ಥಿರವಾದ ಹಣದುಬ್ಬರರಹಿತವಾದ ಹಣನೀತಿಗೆ ಬದ್ಧರಾಗಿ ಇರುತ್ತಾರೆಂದು ಸಾರ್ವಜನಿಕವಾಗಿ ಮನವರಿಕೆ ಮಾಡಿಕೊಡಲು ಅಗತ್ಯವಾದ ಕ್ರಮಗಳಿಗೂ ಸಂಬಂಧವಿರುತ್ತದೆ. ಹಣನೀತಿಗೆ ಯಾವುದಾದರೊಂದು ರೀತಿಯ ಸ್ಥಿರ ನಿಯಮವನ್ನು ಕಾನೂನಿನ ಮೂಲಕ ಜಾರಿಗೆ ತರಬೇಕು ಎಂಬುದು ಕೆಲವು ಅರ್ಥಶಾಸ್ತ್ರಜ್ಞರು ಪ್ರತಿಪಾದಿಸುವ ಒಂದು ಮಾರ್ಗವಾಗಿದೆ. ಐತಿಹಾಸಿಕವಾಗಿ ಪ್ರಮಿತಿಯು

---

* *Finance and Development*, March 1992 : 'Central Bank Independence' by Marta Castello-Branco and Mark Swinburne

## ಆಚರಣೆಗೆ ಸಂಬಂಧಿಸಿದ ಸಮಸ್ಯೆಗಳು

ಸ್ವತಂತ್ರ ಕೇಂದ್ರ ಬ್ಯಾಂಕ್ ಒಂದನ್ನು ಸ್ಥಾಪಿಸುವುದರ ಸಂದರ್ಭಗಳನ್ನು ಪರಿಗಣಿಸುವಲ್ಲಿ ಒಂದು ದೇಶ ಎರಡು ಪ್ರಮುಖ ಪ್ರಶ್ನೆಗಳಿಗೆ ಗಮನ ನೀಡಬೇಕಾಗುತ್ತದೆ. ಆ ದೇಶದಲ್ಲಿ ಔಪಚಾರಿಕ ಸ್ವಾತಂತ್ರ್ಯ ಎಷ್ಟರಮಟ್ಟಿಗೆ ಅಪೇಕ್ಷಿತ ಮತ್ತು ವಾಸ್ತವಿಕವಾಗಿರಬಹುದು ಎಂದು ರಾಜಕಾರಣಿಗಳು, ಒಟ್ಟಿನಲ್ಲಿ ಸಮಾಜ, ಪರಿಗಣಿಸಬಹುದು, ಎಂಬುದು ಮೊದಲನೆಯದು. ಕೇಂದ್ರ ಬ್ಯಾಂಕ್ ಸ್ವಾತಂತ್ರ್ಯವು ಹಣನೀತಿಯ ವಿಶ್ವಾಸಾರ್ಹತೆಯನ್ನು ಸುಧಾರಿಸಬಹುದೆಂಬ ವಾದವನ್ನು ತಾತ್ವಿಕವಾಗಿ ಒಪ್ಪಿಕೊಂಡರೂ, ಸ್ವಾತಂತ್ರ್ಯದ ಅಪೇಕ್ಷಿತ ಮಟ್ಟವು ಆಯಾ ದೇಶಗಳಿಗೆ ನಿರ್ದಿಷ್ಟವಾದ ಹಲವು ಅಂಶಗಳನ್ನು ಆಧರಿಸಬಹುದ್ದಾಗಿದೆ. ಒಂದು ದೇಶದ ಹಣದುಬ್ಬರದ ಇತಿಹಾಸ, ರಾಜಕೀಯ ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ತಡೆತೋಲಗಳ ಸ್ವರೂಪ, ಸಾರ್ವಜನಿಕರಲ್ಲಿ ಆರ್ಥಿಕ ಅರಿವಿನ ಮತ್ತು ಚರ್ಚೆಯ ಮಟ್ಟ ಹಾಗೂ ಹಣಕಾಸು ಮಾರುಕಟ್ಟೆಗಳ ಅಭಿವೃದ್ಧಿಯ ಸ್ಥಿತಿ, ಇವನ್ನು ಈ ಅಂಶಗಳು ಒಳಗೊಂಡಿರಬಹುದು.

ಕೇಂದ್ರ ಬ್ಯಾಂಕ್ ಸ್ವಾತಂತ್ರ್ಯದ ಮಟ್ಟ ಎಷ್ಟಿರಬೇಕು ಎಂಬ ಉದ್ದೇಶವನ್ನು ನಿರ್ಧರಿಸಿದ ಮೇಲೆ, ಹಣನೀತಿಯ ದಿಕ್ಕು ಯಾವುದೇ ನಿರ್ದಿಷ್ಟ ಕಾಲದಲ್ಲಿ ತೊಡಗಿದ ವ್ಯಕ್ತಿಗಳನ್ನು ಅವಲಂಬಿಸದಂತೆ ಈ ಮಟ್ಟದ ಸ್ವಾತಂತ್ರ್ಯವನ್ನು ಜಾರಿಗೆ ತರಲು ಅಗತ್ಯವಾದ ವ್ಯವಸ್ಥೆಗಳು ಯಾವುವು ಎಂಬುದು ಎರಡನೆಯದು. ಇಂಥ ವ್ಯವಸ್ಥೆಗಳ ವಿವರಗಳು ಬಹು ಮುಖ್ಯವಾಗಬಹುದಾದ ಸಂಭವವಿದೆ ಮತ್ತು ರಾಜಕಾರಣಿಗಳು ಹಾಗೂ ಕೇಂದ್ರ ಬ್ಯಾಂಕರ್‌ಗಳು ಯಾವ ಉತ್ತೇಜಕಗಳ ಅಡಿಯಲ್ಲಿ ವ್ಯವಹಾರ ನಡೆಸುವ ಪ್ರವೃತ್ತಿ ಹೊಂದಿರುತ್ತಾರೆ ಎಂಬುದನ್ನು ಮತ್ತು ಅವರುಗಳ ನಡುವಣ ಔಪಚಾರಿಕ ಮತ್ತು ಅನೌಪಚಾರಿಕ ಸ್ವರೂಪವನ್ನು ಗಣನೆಗೆ ತೆಗೆದುಕೊಳ್ಳುವುದು ಅಗತ್ಯವಾಗಿದೆ. ಈ ಕ್ಷೇತ್ರಗಳಲ್ಲಿ ವಾಸ್ತವವಾಗಿ ಜಾರಿಯಲ್ಲಿರುವ ಪದ್ಧತಿಗಳ ವ್ಯಾಪ್ತಿಯನ್ನು, ಈ ಮುಂದೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

## ಔಪಚಾರಿಕ ಹಣನೀತಿ ಜವಾಬ್ದಾರಿ ಮತ್ತು ವಿವಾದ ಪರಿಹಾರ

ನೀತಿಯನ್ನು ರಾಜಕೀಯ ಪ್ರಾಧಿಕಾರಿಗಳೊಂದಿಗೆ ಸಮಾಲೋಚಿಸಿಯಾದರೂ ನಿರ್ವಹಿಸುವುದನ್ನು ಕುರಿತಂತೆ ಕೇಂದ್ರ ಬ್ಯಾಂಕಿನ ಕರ್ತವ್ಯವನ್ನು ವ್ಯಾಪಕವಾಗಿ ಗುರುತಿಸಲಾಗಿದೆ. ಆದರೆ, ಈ ಸಂದರ್ಭದಲ್ಲಿ ಕೂಡ ಕೇಂದ್ರ ಬ್ಯಾಂಕಿಗೆ ನಾನಾ ಸ್ತರಗಳಲ್ಲಿ ಸ್ವಾತಂತ್ರ್ಯ ಇರುತ್ತದೆ.

ಜರ್ಮನಿಯ ಬುಂಡೆಸ್ ಬ್ಯಾಂಕ್ ಮತ್ತು ಸ್ವಿಸ್ ನ್ಯಾಷನಲ್ ಬ್ಯಾಂಕುಗಳು, ಅತ್ಯಂತ ಸ್ವತಂತ್ರ ಕೇಂದ್ರ ಬ್ಯಾಂಕುಗಳೆಂದು ಪರಿಗಣಿತವಾಗಿವೆ. ಸರ್ಕಾರದ ನೀತಿಯು ಚಲಾರ್ಥದ ಬಾಹ್ಯ ಮತ್ತು ಆಂತರಿಕ ಮೌಲ್ಯದ ಸ್ಥಿರತೆಯನ್ನು ಕಾಪಾಡುವುದನ್ನು ಕುರಿತಂತೆ ಬುಂಡೆಸ್‌ಬ್ಯಾಂಕ್‌ನ ಪರಿನಿಯತ ಪಾತ್ರಕ್ಕೆ ಅಸಂಗತವಾಗಿದ್ದಲ್ಲಿ, ಅದು ಆ ನೀತಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದ್ದಿಲ್ಲ; ಸ್ವಿಸ್ ರಾಷ್ಟ್ರೀಯ ಬ್ಯಾಂಕ್ ಸ್ವಿಸ್ ಒಕ್ಕೂಟ ಸರ್ಕಾರದ ಸಲಹೆಯನ್ನು ಕೇಳಬೇಕು (ಅಂತೆಯೇ ನೀಡಲೂಬಹುದು). ಆದರೆ ಅದು ಸರ್ಕಾರದ ಅನುಮೋದನೆಯನ್ನು ಪಡೆಯಬೇಕಿಲ್ಲ.

ಇನ್ನೊಂದು ತುದಿಯಲ್ಲಿ ಕೇಂದ್ರ ಬ್ಯಾಂಕುಗಳು ಹಣನೀತಿ ಕುರಿತಂತೆ ಸಲಹೆ ನೀಡುತ್ತವೆ ಮತ್ತು ಅದನ್ನು ಜಾರಿಗೊಳಿಸುತ್ತವೆ. ಆದರೆ ಹಣನೀತಿ ಕುರಿತ ಮುಖ್ಯ ತೀರ್ಮಾನಗಳ ಜವಾಬ್ದಾರಿಯು ಸರ್ಕಾರದಲ್ಲೇ ಇರುತ್ತದೆ.

ಈ ಎರಡು ತುದಿಗಳ ನಡುವಣ ಕೇಂದ್ರ ಬ್ಯಾಂಕುಗಳ ಪೈಕಿ ಕೆಲವುಗಳ ಬಗ್ಗೆ ಹೇಳುವುದಾದರೆ, ಅವುಗಳ ಔಪಚಾರಿಕ ಪರಿನಿಯತ ಸ್ಥಿತಿಗಳು ಸೂಚಿಸುವುದಕ್ಕಿಂತ ವಾಸ್ತವವಾಗಿ ಹೆಚ್ಚು ಅಥವಾ ಕಡಿಮೆ ಸ್ವಾತಂತ್ರ್ಯ ಹೊಂದಿರಬಹುದು. (ಉದಾ ಅಮೆರಿಕದ ಫೆಡರಲ್ ರಿಸರ್ವ್ ಬ್ಯಾಂಕು)

ಇನ್ನೂ ಕೆಲವು ಕೇಂದ್ರ ಬ್ಯಾಂಕುಗಳು (ಉದಾ : ನೆದರ್‌ಲ್ಯಾಂಡ್ಸ್ ಮತ್ತು ನ್ಯೂಜಿಲ್ಯಾಂಡ್‌ಗಳಲ್ಲಿ) ಮೂರನೇ ಬಗೆಯ ವ್ಯವಸ್ಥೆಯನ್ನು ಪಾಲಿಸುತ್ತವೆ. ಇಲ್ಲಿ ಹಣನೀತಿ ಕುರಿತಂತೆ ಕೇಂದ್ರ ಬ್ಯಾಂಕಿಗೆ ಯಥೇಚ್ಛ ಸ್ವಾಯತ್ತತೆ ಇದೆಯಾದರೂ ಸರ್ಕಾರವು ಅದನ್ನು ತಳ್ಳಿಹಾಕುವ ಭವಸಾಮರ್ಥ್ಯ ಹೊಂದಿದೆ. ಆದಾಗ್ಯೂ, ಈ ವ್ಯವಸ್ಥೆಗಳನ್ನು ಕುರಿತಂತೆ ಮುಖ್ಯವಾದ ಅಂಶವೆಂದರೆ ಕೇಂದ್ರ ಬ್ಯಾಂಕಿನ ಯಾವುದೇ ತೀರ್ಮಾನಗಳನ್ನು ತಳ್ಳಿಹಾಕುವ ಕಾರ್ಯ ಬಹಿರಂಗವಾಗಿಯೇ ಆಗಬೇಕು.

ಸರ್ಕಾರದ ಮೇಲೆ ಶಿಸ್ತಿನ ಪರಿಣಾಮಕಾರಿಯಾದ ತಡೆಯೊಂದನ್ನು ಮತ್ತು ಸರ್ಕಾರದೊಂದಿಗೆ ಕೇಂದ್ರ ಬ್ಯಾಂಕಿನ ಸಂಬಂಧಗಳನ್ನು ಕುರಿತಂತೆ ರಕ್ಷಣೆಯನ್ನು ಸಾಧಿಸುವುದೂ ಈ ಒಂದು ರೀತಿಯ ರಾಜೀಸೂತ್ರದ ಉದ್ದೇಶವಾಗಿರುತ್ತದೆ. ಆದರೆ ಹಣನೀತಿ ಕುರಿತಂತೆ ಅಂತಿಮ ಜವಾಬ್ದಾರಿ ಸರ್ಕಾರದ್ದೇ ಆಗಿರುತ್ತದೆ ಎಂಬುದನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ.

## ಶಾಸನಬದ್ಧ ಉದ್ದೇಶಗಳು

ಹೆಚ್ಚಿನ ಔಪಚಾರಿಕ ಸ್ವಾತಂತ್ರ್ಯ ಹೊಂದಿದ ಕೇಂದ್ರ ಬ್ಯಾಂಕುಗಳು ತೌಲನಿಕವಾಗಿ ಹೆಚ್ಚು ಸಂಕುಚಿತ ದೃಷ್ಟಿಯ ಉದ್ದೇಶದೊಂದಿಗೆ ಚಲಾರ್ಥದ ದೇಶೀಯ ಮತ್ತು ಬಹುಶಃ ಬಾಹ್ಯ ಮೌಲ್ಯ ಸ್ಥಿರತೆಗೆ ಒತ್ತುಕೊಡುವ ಶಾಸನಬದ್ಧ ಸಮಷ್ಟಿಅರ್ಥಶಾಸ್ತ್ರೀಯ ಉದ್ದೇಶದಿಂದ ಕೂಡಿರುವ ಪ್ರವೃತ್ತಿಯನ್ನು ಸಾಮಾನ್ಯವಾಗಿ ಹೊಂದಿರುತ್ತವೆ. ಈ ಸಾಮಾನ್ಯ ಪ್ರವೃತ್ತಿಯು, ಉದಾ: ಚಿಲಿ ಮತ್ತು ನ್ಯೂ ಜೀಲೆಂಡ್‌ನಲ್ಲಿ ೧೯೮೯ರ ಅನಂತರ ಕಂಡಂತೆ ಮತ್ತು ಜರ್ಮನಿ ಹಾಗೂ ನೆದರ್‌ಲ್ಯಾಂಡ್ಸ್‌ನಲ್ಲಿರುವಂತೆ, ಹಣನೀತಿಯ ವಿಶ್ವಾಸಾರ್ಹತೆಯನ್ನು ಪ್ರವರ್ತಿಸುವ ಇಚ್ಛೆಯ ರೂಪದಲ್ಲಿ ವ್ಯಕ್ತಪಟ್ಟಿದೆ. ವಿಭಿನ್ನ ಉದ್ದೇಶಗಳ ನಡುವೆ ಹೊರಳಿಕೊಳ್ಳುವ ನೀತಿರಚಕರ ಪ್ರವೃತ್ತಿಯು, ವಿಶ್ವಾಸಾರ್ಹತೆಯ ಸಮಸ್ಯೆಗೆ ಆಧಾರವಾಗಿರುವುದರಿಂದ ಅನೇಕ ಅಥವಾ ಅಸ್ಪಷ್ಟ ಶಾಸನಬದ್ಧ ಉದ್ದೇಶಗಳು ಈ ಇಚ್ಛೆಗೆ ಹೊಂದಿಕೊಳ್ಳುವ ಸಂಭಾವ್ಯತೆ ಇಲ್ಲ. ಬದಲಾಗಿ ಅವು ಹಣನೀತಿಯ ಪಾರದರ್ಶಕತೆಯನ್ನು ಕಡಿಮೆ ಮಾಡುವ ಪ್ರವೃತ್ತಿ ಹೊಂದಿರುತ್ತವೆ ಮತ್ತು ತನ್ಮೂಲಕ ಕೇಂದ್ರ ಬ್ಯಾಂಕ್ ಮತ್ತು ರಾಜಕೀಯ ಮುಂದಾಳುತನ ಎರಡರ ಉತ್ತರದಾಯಿತ್ವವನ್ನು ದುರ್ಬಲಗೊಳಿಸುತ್ತದೆ—ಒಂದು ಉದ್ದೇಶಕ್ಕೆ ಸಂಬಂಧಿಸಿದಂತೆ ಆದ ನೀತಿವೈಫಲ್ಯವನ್ನು ಇತರ ಉದ್ದೇಶಗಳನ್ನು ಉಲ್ಲೇಖಿಸಿ ಬಲು ಸುಲಭವಾಗಿ ಕ್ಷಮಿಸಿಬಿಡಬಹುದು.

ಸ್ವತಂತ್ರ ಕೇಂದ್ರ ಬ್ಯಾಂಕಿನ ಹಣನೀತಿ ಕುರಿತಂತೆ ಬೆಲೆ ಸ್ಥಿರತೆಯ ಏಕೈಕ ಹಾಗು ಸ್ಪಷ್ಟವಾಗಿ ವ್ಯಾಖ್ಯಿಸಿದ ಶಾಸನಬದ್ಧ ಉದ್ದೇಶದ ಪ್ರಾಮುಖ್ಯವನ್ನು ಈ ಅಂಶಗಳು ಸೂಚಿಸುತ್ತವೆ. ಹಿಂದಿನ ಹಣನೀತಿಯನ್ನು ತೊರೆದು ಹಣ ಕುರಿತ ಶಿಸ್ತಿನ ಬಗ್ಗೆ ಈಗಾಗಲೇ ಸುಸ್ಥಾಪಿತವಾದ ಖ್ಯಾತಿ ಹೊಂದಿರುವ ಕೇಂದ್ರ ಬ್ಯಾಂಕ್ ನೀತಿಗೆ ವಿರುದ್ಧವಾಗಿ ಭವಿಷ್ಯಕ್ಕಾಗಿ ಹಣನೀತಿಯ ಹೆಚ್ಚಿನ ವಿಶ್ವಾಸಾರ್ಹತೆಯನ್ನು ಪ್ರವರ್ತಿಸಬಲ್ಲ ದೇಶ ಒಂದಕ್ಕೆ ಅದರ ಶಾಸನಬದ್ಧ ಆದೇಶದಲ್ಲಿ ಗರಿಷ್ಠ ಮಟ್ಟದ ಸ್ಪಷ್ಟತೆ ಇರುವುದು ವಿಶೇಷವಾಗಿ ಮುಖ್ಯವೆನಿಸುವ ಸಂಭವವಿದೆ.

## ಹಣನೀತಿ ಕುರಿತ ಉತ್ತರದಾಯಿತ್ವ ಮತ್ತು ಕಣ್ಗಾವಲು

ಹಣನೀತಿ ಕುರಿತ ಉದ್ದೇಶವನ್ನು ಸ್ಪಷ್ಟವಾಗಿ ವ್ಯಾಖ್ಯಿಸುವುದಷ್ಟೆ ಆ ನೀತಿಯ ಹೆಚ್ಚಿನ ವಿಶ್ವಾಸಾರ್ಹತೆಗೆ ಸಾಕಾಗದು. ಆ ಉದ್ದೇಶವನ್ನು ಸಾಧಿಸಲು ಸ್ವತಂತ್ರ ಕೇಂದ್ರ ಬ್ಯಾಂಕಿಗೆ ವಾಸ್ತವವಾಗಿ ಪ್ರೇರಣೆಯನ್ನು ನೀಡುತ್ತಿರುವುದಾಗಿ ಸಾರ್ವಜನಿಕರಿಗೆ ಭರವಸೆ ನೀಡುವುದು ಕೂಡ ಅಗತ್ಯವಾಗಿದೆ. ಇತರ ವಿಷಯಗಳ ಜೊತೆಗೆ ಹಣನೀತಿಯ ಸಾಧನೆಯ ಮೇಲೆ ಸಾರ್ವಜನಿಕರು ತಕ್ಕ ಮಟ್ಟಿಗೆ ನಿಗಾ ಇಡಲು ಸಮರ್ಥವಾಗಿರಬೇಕಾಗುತ್ತದೆ. ಮತ್ತು ಅದರ ರೂಪಣೆಗೆ ಹಾಗೂ ಜಾರಿಗೆ ಪ್ರತ್ಯಕ್ಷವಾಗಿಯೊ, ಪರೋಕ್ಷವಾಗಿಯೊ ಜವಾಬ್ದಾರರಾಗಿರುವವರನ್ನು ಉತ್ತರದಾಯಿಗಳೆಂದು ಭಾವಿಸುವುದು ಅಗತ್ಯವಾಗಿದೆ.

ಸಾಮಾನ್ಯವಾಗಿ, ನ್ಯೂ ಜೀಲೆಂಡ್‌ನಂಥ ಪ್ರಮುಖ ದೇಶವನ್ನು ಹೊರತುಪಡಿಸಿ ಬಹುತೇಕ ಕೇಂದ್ರ ಬ್ಯಾಂಕುಗಳ ಕಾನೂನು ನಿರ್ದಿಷ್ಟವಾಗಿ ಶಕ್ತಿಯುತವಾದ, ಉತ್ತರದಾಯಿತ್ವದ ಮತ್ತು ಕಣ್ಗಾವಲಿನ ವ್ಯವಸ್ಥೆಗಳನ್ನು ಸ್ಥಾಪಿಸುವುದಿಲ್ಲ, ಆದಾಗ್ಯೂ, ಸಾರ್ವಜನಿಕರು ಹಣನೀತಿಯ ಮೇಲೆ

ನಿಗಾ ಇಡುವಂತೆ ಶಾಸನಾತ್ಮಕವಾಗಿ ನಿರ್ದೇಶಿಸಲಾಗಿದೆ ಮತ್ತು ಕೇಂದ್ರ ಬ್ಯಾಂಕಿನ ಸ್ವಾಯತ್ತ ಉದ್ದೇಶವನ್ನು ನೀತಿಗೆ ಸಂಬಂಧಿಸಿದಂತೆ. ಮಾರ್ಗದರ್ಶಕ ಸೂತ್ರಗಳಾಗಿ ಪರಿವರ್ತಿಸಲು ಅವಕಾಶವನ್ನಿ ಕೊಡಲು ಸುಲಭ ಸಾಧನಯೋಗ್ಯ ಕ್ರಮಗಳನ್ನು ರೂಪಿಸಲು ಹೆಚ್ಚು ಸ್ವತಂತ್ರವಾದ ಚಟುವಟಿಕೆ ಕೇಂದ್ರ ಬ್ಯಾಂಕುಗಳು ಮಾಡುತ್ತಿವೆ. ಜರ್ಮನ್ ಬ್ಯಾಂಕ್ ಮತ್ತು ಸ್ವಿಸ್ ನ್ಯಾಷನಲ್ ಬ್ಯಾಂಕ್‌ನ ವಿಷಯದಲ್ಲಿ ಹಣಸಂಬಂಧಿ ಸಮಷ್ಟಿ ಗುರಿಗಳನ್ನು ಕುರಿತಂತೆ ಬದ್ಧತೆಗಳ ರೂಪದಲ್ಲಿ ಇರುತ್ತದೆ. ನೆದರ್‌ಲ್ಯಾಂಡ್ಸ್‌ನಲ್ಲಿ ಐರೋಪ್ಯ ಹಣವ್ಯವಸ್ಥೆಯ ವಿನಿಮಯ ದರ ವ್ಯವಸ್ಥೆಯ ಸದಸ್ಯತ್ವವು ಇದೇ ಕಾರ್ಯವನ್ನು ನಿರ್ವಹಿಸುತ್ತದೆ. ನ್ಯೂಜಿಲ್ಯಾಂಡಿನಲ್ಲಿ 1992ರ ಅಂತ್ಯದ ವೇಳೆಗೆ ಶೇಕಡ 0-2ರ ನಡುವಿನ ಹಣದುಬ್ಬರ ವ್ಯಾಪ್ತಿಯ ಒಳಗಿರುವ ಹಣದುಬ್ಬರದ, ಸುವ್ಯಕ್ತವಾದ ಗುರಿಯ ಹಾದಿಯನ್ನು ಸ್ಥಾಪಿಸಲಾಗಿದೆ. ಮತ್ತು ರಿಸರ್ವ್ ಬ್ಯಾಂಕಿನ ಗವರ್ನರ ಸಾಧನೆಯ ಕುರಿತು ಎಂದು ಮುಖ್ಯವಾಗಿ ಹೇಳಬಹುದಾದ ಭಾವನೆಗೆ ಇದನ್ನು ಬಾಧಿಸಲಾಗಿದೆ. ಕೆನಡಾ ಕೂಡ ಇಂಥ ಹಣದುಬ್ಬರ ಗುರಿಯ ವರ್ಗವನ್ನು ಸ್ಥಾಪಿಸಿದೆ. ಆದರೆ, ನ್ಯೂಜಿಲ್ಯಾಂಡಿನಲ್ಲಿರುವ ಶಾಸನದ ಬೆಂಬಲ ಅಲ್ಲಿಲ್ಲ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲೂ ಇಂತಹವೇ ಪ್ರಸ್ತಾವಗಳನ್ನು ಪರಿಗಣಿಸಲಾಗಿದೆ.

## ಕೇಂದ್ರಬ್ಯಾಂಕ್ ಮಂಡಲಿಗಳ ಪಾತ್ರ ಸಂರಚನೆ ಮತ್ತು ನೇಮಕಾತಿ

ಕೇಂದ್ರ ಬ್ಯಾಂಕ್ ಮಂಡಲಿಗಳ ಪಾತ್ರ ಮತ್ತು ಸಂರಚನೆಗಳು ಕೇಂದ್ರ ಬ್ಯಾಂಕುಗಳ ಮತ್ತು ಸರ್ಕಾರಗಳ ನಡುವಿನ ಸಂಬಂಧದ ಸ್ವರೂಪದ ಮೇಲೆ ಮುಖ್ಯವಾದ ಪ್ರಭಾವವನ್ನು ಹೊಂದಿರಬಹುದು. ಕೆಲವು ಸಂದರ್ಭಗಳಲ್ಲಿ ಈ ಮಂಡಲಿಗಳು ಕೇಂದ್ರ ಬ್ಯಾಂಕಿನ ನಿರ್ಧಾರಗಳ ಮೇಲೆ ಸ್ವಲ್ಪ ಪ್ರಭಾವವನ್ನು ನೇರವಾಗಿ ಬೀರಲು ಸರ್ಕಾರಕ್ಕೆ ಪ್ರಮುಖವಾದ ವರ್ಗದ ಪ್ರತಿನಿಧಿಸ್ವರೂಪವಾಗಿರುತ್ತವೆ. ಎಲ್ಲರನ್ನೂ ಅಲ್ಲದಿದ್ದರೂ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ಕೇಂದ್ರ ಬ್ಯಾಂಕ್ ಮಂಡಲಿಗಳಿಗೆ ಸರ್ಕಾರಗಳು ಪರಿಣಾಮಕಾರಿಯಾಗಿ ನೇಮಕ ಮಾಡುತ್ತವೆ ಮತ್ತು ಸರ್ಕಾರವನ್ನು ಅಥವಾ ಖಜಾನೆಯನ್ನು ಸ್ಪಷ್ಟವಾಗಿ ಪ್ರತಿನಿಧಿಸುವ ಪದನಿಮಿತ್ತ ಅಥವಾ ಸಲಹಾಮಂಡಲಿ ಸದಸ್ಯರು ಕೂಡ ಅಲ್ಲಿ ಇರಬಹುದು. ಆದಾಗ್ಯೂ ಹೆಚ್ಚಿನ ಪ್ರಮಾಣದ ಸ್ವಾತಂತ್ರ್ಯ ಹೊಂದಿರುವ ಬ್ಯಾಂಕುಗಳಲ್ಲಿ, ನೇಮಕಾತಿ (ಮತ್ತು ವಜಾ)ಮಾಡುವ ಸರ್ಕಾರದ ಅಧಿಕಾರಕ್ಕೆ ಸಾಮಾನ್ಯವಾಗಿ ಕೆಲವು ಮಿತಿಗಳಿರುತ್ತವೆ. ಸರ್ಕಾರೇತರ ನೇಮಕಾತಿಗಳು, ನೇಮಕಾತಿ ಪ್ರಕ್ರಿಯೆಗಳಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ, ಅಥವಾ ಸರ್ಕಾರಗಳು ತಮ್ಮ ಅಭ್ಯರ್ಥಿಗಳನ್ನೇ ಕೇಂದ್ರ ಬ್ಯಾಂಕ್ ಮಂಡಲಿಗಳಿಗೆ ತುಂಬುವ ಅವಕಾಶಗಳನ್ನು ಕಡಿಮೆ ಮಾಡಲು ನಿರ್ದೇಶಕರಿಗೆ ಹೆಚ್ಚು ದೀರ್ಘ ಮತ್ತು ವ್ಯತ್ಯಸ್ತವಾದ ಅವಧಿಗಳನ್ನು ಕುರಿತಂತೆ ಉಪಬಂಧಗಳು ಈ ಮಿತಿಗಳಲ್ಲಿ ಇರುತ್ತವೆ.

## ಸರ್ಕಾರಕ್ಕೆ ಧನಪೋಷಣೆಯ ಮಿತಿಗಳು

ಸರ್ಕಾರಕ್ಕೆ ಕೇಂದ್ರ ಬ್ಯಾಂಕ್ ನಿಧಿ ಪೂರೈಕೆಯಲ್ಲಿ ಶಾಸನಾತ್ಮಕ ಪರಿಮಿತಿಗಳ ವ್ಯಾಪ್ತಿಯು ಹಣನೀತಿ ಕುರಿತ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ಭವಿಷ್ಯದಲ್ಲಿ ಮುಖ್ಯವಾಗುವ ಒಂದು ಅಂಶವಾಗಿರಬಹುದು. ಸಾರ್ವಜನಿಕ ವೆಚ್ಚಕ್ಕೆ (ಮುಖ್ಯಕಾಲದ ಹಣಕ್ಕೆ ಋಣಗಳನ್ನು ಬಿಟ್ಟು) ಕೇಂದ್ರ ಬ್ಯಾಂಕು ನೇರವಾಗಿ ಅಥವಾ ಪರೋಕ್ಷವಾಗಿ ಯಾವುದೇ ಬಗೆಯ ಧನಪೋಷಣೆ ಮಾಡುವುದನ್ನು ಮತ್ತು ಸರ್ಕಾರ ಅದರ ಅಧಿಕಾರಿಗಳು ಅಥವಾ ಉದ್ಯಮಗಳು ನೀಡುವ ಪತ್ರವನ್ನು ಕೇಂದ್ರ ಬ್ಯಾಂಕ್ ಕೊಳ್ಳುವುದನ್ನು ನಿಷೇಧಿಸುವ ಅನುಬಂಧಗಳಾದ ಬಗೆಗೆ ಶಿಫಾರಸುಗಳು ಚರ್ಚೆ ನಡೆಯುತ್ತಿವೆ.

ಜರ್ಮನಿ, ಸ್ವಿಟ್ಜರ್‌ಲ್ಯಾಂಡ್ ಮತ್ತು ನೆದರ್‌ಲ್ಯಾಂಡ್ಸ್‌ಗಳಂತಹ ಇತರ ದೇಶಗಳಲ್ಲಿ ಸರ್ಕಾರಕ್ಕೆ ಕೇಂದ್ರಬ್ಯಾಂಕ್ ನೇರವಾಗಿ ಧನವ ನೀಡುವುದಕ್ಕೆ ಶಾಸನ ಕಟ್ಟುನಿಟ್ಟಾದ ಮಿತಿಗಳನ್ನು ವಿಧಿಸುತ್ತದೆ. ಅದೇ ತರದ ವಹಿವಾಟುಗಳ ಮಿತಿಗಳು ಸಂದರ್ಭದಲ್ಲಿ ಸಾಲದ ಪತ್ರಗಳನ್ನು ಪಡೆಯಲು ಅವಕಾಶ ನೀಡುತ್ತದೆ. ಈ ಮಿತಿಗಳನ್ನು ವಿಧಿಸುವುದು ಮುಖ್ಯವಾಗಿರಬಹುದಾದರೂ, ನೀಡುವ ಸಾಲದ ಮೇಲೆ ಈ ಶಾಸನಾತ್ಮಕ ಮಿತಿಗಳ ಪರಿಣಾಮಕಾರಿತ್ವವು ಸ್ವಲ್ಪಮಟ್ಟಿಗೆ ಅಸ್ಪಷ್ಟವಾಗಿದೆ. ಆಚರಣೆಯಲ್ಲಿ ಕೇಂದ್ರ ಬ್ಯಾಂಕು ಸ್ವತಂತ್ರವಾಗಿದ್ದಾಗ ಈ ಮಿತಿಗಳು ನಿರ್ದಿಷ್ಟವಾಗಿ ಪರಿಣಾಮಕಾರಿಯಾಗಿರುವುದಿಲ್ಲ ಎನ್ನಲಾಗಿದೆ. ಮತ್ತು ಕೇಂದ್ರಬ್ಯಾಂಕು ಹಣಕಾಸಿನ ಬಗ್ಗೆ ಸ್ಪಷ್ಟ ಜವಾಬ್ದಾರಿ ಹೊಂದಿದ್ದು ಸ್ವತಂತ್ರವಾಗಿದ್ದಾಗ ಈ ಮಿತಿಗಳು ಅವಶ್ಯಕವೆನಿಸಲಾರವು. ಆದಾಗ್ಯೂ, ಇತರ ದೇಶಗಳಿಗೆ ಹೋಲಿಸಿದಾಗ ತೌಲನಿಕವಾಗಿ ಕಡಿಮೆ ವಿಕಾಸ ಹೊಂದಿದ ಹಣಕಾಸು ಮಾರುಕಟ್ಟೆಗಳು ಇರುವ ದೇಶದಲ್ಲಿಯ ಅಸ್ವತಂತ್ರ ಕೇಂದ್ರಬ್ಯಾಂಕಿನ ವಿಚಾರದಲ್ಲಿ ಈ ಮಿತಿಗಳನ್ನು ವಾಸ್ತವವಾಗಿ ಗೌರವಿಸಿದ್ದೇ ಆದರೆ ಆಗಲೂ ಈ ಶಾಸನಬದ್ಧ ಮಿತಿಗಳು ಉಪಯುಕ್ತವೆನಿಸಬಹುದು.

## ಬಜೆಟ್ ಕುರಿತಂತೆ ಕೇಂದ್ರ ಬ್ಯಾಂಕಿನ ಸ್ವಾತಂತ್ರ್ಯ

ಹಣನೀತಿ ಕುರಿತ ಸ್ವಾತಂತ್ರ್ಯದ ಮಟ್ಟ ಏನೇ ಇರಲಿ, ಕೇಂದ್ರ ಬ್ಯಾಂಕುಗಳು ಸಾಮಾನ್ಯವಾಗಿ ತಮ್ಮ ಸರ್ಕಾರಗಳಿಂದ ಗಮನಾರ್ಹವಾದ ಹಣಕಾಸು ಸ್ವಾತಂತ್ರ್ಯವನ್ನು ಹೊಂದಿರುತ್ತವೆ ಮತ್ತು ನಿರ್ದಿಷ್ಟವಾಗಿ, ಖರ್ಚು ಕುರಿತಂತೆ ತಮ್ಮದೇ ಆದ ಮುಂಗಡಪತ್ರಗಳನ್ನು ಸಾಮಾನ್ಯವಾಗಿ ರೂಪಿಸಬಹುದು. ಇವಕ್ಕೆ ಅಪವಾದಗಳಲ್ಲಿ ಫ್ರಾನ್ಸ್, ಜಪಾನ್, ಮತ್ತು ನ್ಯೂಜಿಲ್ಯಾಂಡ್ ಸೇರಿವೆ. ಇದರ ಜೊತೆಗೆ ಬಜೆಟ್ ರೂಪಣೆಯಲ್ಲಿ ಸ್ವಾತಂತ್ರ್ಯ ಇಲ್ಲದಿದ್ದಾಗ ಸಂಪನ್ಮೂಲಗಳನ್ನು ಪಡೆಯುವಲ್ಲಿ ಬ್ಯಾಂಕ್ ನೀತಿಯ ಮೇಲೆ ನಿರ್ಬಂಧವನ್ನು ವಿಧಿಸುವುದರ ಮೂಲಕ ಅದರ ಮೇಲೆ ಸಲ್ಲದ ಪ್ರಭಾವವನ್ನು ಸರ್ಕಾರ ಪರೋಕ್ಷವಾಗಿ ಬೀರಬಹುದು ಎಂಬುದು ಬ್ಯಾಂಕಿಗೆ ಮುಂದೆ ಉದ್ಭವಿಸಬಹುದಾದ ಒಂದು ಆತಂಕವಾಗಿದೆ. ನ್ಯೂಜಿಲೆಂಡಿನಲ್ಲಿ, ಈ ಆತಂಕ ಕಡಿಮೆಯಾಗಿದೆ. ಏಕೆಂದರೆ ವಾರ್ಷಿಕ ಬಜೆಟ್ ಅನುಮೋದನೆ ಅಲ್ಲಿ ಅಗತ್ಯವಿಲ್ಲ. ಅದರ ಬದಲು ಸರ್ಕಾರದೊಂದಿಗೆ ನಿಧಿಗಳ ಬಗ್ಗೆ ಸಂಧಾನದ ಮೂಲಕ ಮಾಡಿಕೊಂಡ ಒಪ್ಪಂದಗಳು ಐದು ವರ್ಷಗಳ ಅವಧಿಯವು ಆಗಿರುತ್ತವೆ. ಬದಲಾಗಿ, ಕೇಂದ್ರ ಬ್ಯಾಂಕು ಸರ್ಕಾರದ ಹಣನೀತಿಯನ್ನು ಸ್ಪಷ್ಟವಾಗಿ ಅನುಸರಿಸುತ್ತಿರುವ ಸಂದರ್ಭದಲ್ಲಿ ಹಣಕಾಸು ಸ್ವಾತಂತ್ರ್ಯಕ್ಕೆ ನೀತಿಯನ್ನು ಕುರಿತಂತೆ ಸಮರ್ಥನೀಯವಾದ ವಾದವೇನೂ ಇದ್ದಂತಿಲ್ಲ.

## ಉಪಸಂಹಾರ

ಇದುವರೆಗಿನ ಅನುಭವವನ್ನು ಪುರಾವೆಗಳು ಅಷ್ಟೇನೂ ಖಚಿತವಾಗಿಲ್ಲದಿದ್ದರೂ, ಕೇಂದ್ರ ಬ್ಯಾಂಕ್ ಸ್ವಾತಂತ್ರ್ಯವು ಹಣದುಬ್ಬರ ಕುರಿತಂತೆ ದೀರ್ಘಕಾಲದಲ್ಲಿ ಸುಧಾರಣೆಯನ್ನು ತರುವ ಭವ ಸಾಮರ್ಥ್ಯ ಹೊಂದಿದೆಯೆಂದು ಪರಿಕಲ್ಪನೆಯ ಆಧಾರದ ಮೇಲೆ ವಾದಿಸಬಹುದು. ಒತ್ತಿ ಹೇಳಬೇಕಾದ ಮುಖ್ಯಾಂಶವೆಂದರೆ ಸಾಂಸ್ಥಿಕ ಚೌಕಟ್ಟಿನ ಹಲವು ಕೇಂದ್ರಬ್ಯಾಂಕಿನ ಔಪಚಾರಿಕ ಸ್ವಾತಂತ್ರ್ಯದ ಆಚರಣೆಯಲ್ಲಿ ಬೆಲೆ ಸ್ಥಿರತೆಗೆ ಮತ್ತು ವಾಸ್ತವವಾಗಿ ಅಂತಹ ಔಪಚಾರಿಕ ಸ್ವಾತಂತ್ರ್ಯದ ತಾಳಿಕೆಗಾಗಿ ಕೂಡ ನೀಡಬಹುದಾದ ಕೊಡುಗೆಯ ಒಂದು ಮುಖ್ಯ ನಿರ್ಣಾಯಕ ಅಂಶವಾಗಿ ಇರಬಹುದು. ಮುಖ್ಯವಾಗಿ ಕೇಂದ್ರ ಬ್ಯಾಂಕುಗಳು ಮತ್ತು ರಾಜಕಾರಣಿಗಳು ಕಲಾಪ ನಡೆಸಲು ಆಧಾರವಾದ ಅನೌಪಚಾರಿಕ ಸಾಂಸ್ಥಿಕ ಮತ್ತು ರಾಜಕೀಯ ವ್ಯವಸ್ಥೆಗಳ ಸ್ವರೂಪವನ್ನು ಬಹಳಷ್ಟು ಅವಲಂಬಿಸಿದೆ. ಆದ್ದರಿಂದ ಶಾಸನದ ಮೂಲಕ ರಚಿಸಿಗೊಂಡ ಚೌಕಟ್ಟು, ಇತರ ಅಂಶಗಳ ಜೊತೆಗೆ, ಹಣನೀತಿ ಉದ್ದೇಶಗಳು ಮತ್ತು ಗುರಿಗಳನ್ನು ಇತ್ಯರ್ಥಗೊಳಿಸಲು ಸೂಕ್ತ ಏರ್ಪಾಟುಗಳ ಮೂಲಕ ಮತ್ತು ಹಣನೀತಿ ಪಾರದರ್ಶಕತೆಯ ಮಟ್ಟವನ್ನು ಗರಿಷ್ಠಗೊಳಿಸುವುದಕ್ಕಾಗಿ ಸರ್ಕಾರ ಮತ್ತು ಕೇಂದ್ರ ಬ್ಯಾಂಕುಗಳ ಸಂಬಂಧವನ್ನು ಕುರಿತು ಕಡಿಮೆ ಔಪಚಾರಿಕ ಅಂಶಗಳನ್ನು ಸಂರಚಿಸಲು ಹೆಚ್ಚಿನ ಗಮನ ನೀಡುವುದೂ ಅಗತ್ಯವೆನಿಸಬಹುದು. ಹಣಕಾಸು ಸಂಯಮ ಚರಾತ್ಮಕವಾಗಿರುವ ಮತ್ತು ಸಾಮಾನ್ಯವಾಗಿ ಅಷ್ಟೇನೂ ಇಲ್ಲದ ಐತಿಹಾಸಿಕ ಹಿನ್ನೆಲೆಯಲ್ಲಿ ನೀತಿ ಕುರಿತಂತೆ ವಿಶ್ವಾಸಾರ್ಹತೆಯನ್ನು ಸ್ಥಾಪಿಸಲು ಯತ್ನಿಸುತ್ತಿರುವ ದೇಶ ಒಂದಕ್ಕೆ ಇದು ವಿಶೇಷವಾಗಿ ಮುಖ್ಯವಾಗಬಹುದು.

●

# ಕನ್ನಡದಲ್ಲಿ ಬ್ಯಾಂಕಿಂಗ್ ಸಾಹಿತ್ಯ ಶ್ರೀ

# ಪುಸ್ತಕ ಪರಿಚಯ

**'ಬ್ಯಾಂಕ್ ವ್ಯವಸಾಯದ ಕೈಪಿಡಿ'**

**ಕನ್ನಡದಲ್ಲಿ ಬ್ಯಾಂಕಿಂಗ್ ಸಾಹಿತ್ಯ ಕುರಿತಂತೆ ಈ ಹಿಂದೆಯೇ ಪ್ರಕಟವಾದ ಪುಸ್ತಕಗಳನ್ನು ಒಂದೊಂದಾಗಿ ಪರಿಚಯಮಾಡಿ ಕೊಡುವುದು ಈ ಅಂಕಣದ ಉದ್ದೇಶ. ಈ ಪರಿಚಯ ಮಾಲೆಯಲ್ಲಿ ಇದು ಮೊದಲನೆಯದು.**


ಪಾ. ರಾಜಗೋಪಾಲ
ಪ್ರಧಾನ ಕಾರ್ಯದರ್ಶಿ
ಸಮನ್ವಯ ಸಮಿತಿ


ಇಂದೂ ಉಳಿದಿರುವ ಹಲವಾರು ಬ್ಯಾಂಕುಗಳಿಗೆ ಉಗಮಸ್ಥಾನವಾದ ಕರ್ನಾಟಕದಲ್ಲಿ ಬ್ಯಾಂಕಿಂಗ್ ಕುರಿತಂತೆ ವಾಙ್ಮಯ ಸೃಷ್ಟಿಯಾಗಿರುವುದು ಹೆಚ್ಚೇನಿಲ್ಲ. ಆದರೂ ಕೆಲವು ಪ್ರಯತ್ನಗಳು ಕನ್ನಡದಲ್ಲಿ ನಡೆಯದೇ ಇಲ್ಲ. ಈ ಪುಸ್ತಕ ಇಂಥ ಪ್ರಯತ್ನಗಳಿಗೆ ಒಂದು ನಿರ್ದಶನ. ೪೧ ವರ್ಷಗಳಷ್ಟು ಹಿಂದೆಯೇ ಬ್ಯಾಂಕಿಂಗ್ ಕುರಿತು ಒಂದು ಕೈಪಿಡಿ ರಚಿಸಿರುವುದು ಶ್ಲಾಘನೀಯ.

ಇದರ ಕರ್ತೃ ಬಿಂದುರಾವ ರಾಘವೇಂದ್ರರಾವು ಕೆಂಭಾವಿಯವರು ಒಬ್ಬ ಬ್ಯಾಂಕ್ ಅಧಿಕಾರಿಯಾಗಿದ್ದರು. ಬ್ಯಾಂಕ್ ಆಫ್ ಇಂಡಿಯಾದಲ್ಲಿ ೧೫ ವರ್ಷಗಳ ಸೇವೆ ಸಲ್ಲಿಸಿ, ಮೂವತ್ತರ ದಶಕದಲ್ಲಿ ಇಂಗ್ಲೆಂಡಿಗೆ ಹೋಗಿ, ಅಲ್ಲಿ ಬ್ಯಾಂಕಿಂಗ್ ಬಗ್ಗೆ ವಿಶೇಷ ಅಧ್ಯಯನ ಮಾಡಿ, ಪ್ರೇರಿತರಾಗಿ ಈ ಕೃತಿ ರಚಿಸಿದ್ದಾರೆ. ಅವರ ಮಾತುಗಳಲ್ಲಿ ಹೇಳುವುದಾದರೆ "ಪಾಶ್ಚಿಮಾತ್ಯ ದೇಶಗಳಲ್ಲಿಯ ಬ್ಯಾಂಕಿನವರು ದಿನಾಲು ಬ್ಯಾಂಕಿನ ಬೇರೆಬೇರೆ ವಿಷಯಕ್ಕೆ ಸಂಬಂಧಿಸಿದ ಕೆಲವು ಕೈಪಿಡಿಗಳನ್ನು ಪ್ರಕಟಿಸುತ್ತಲಿರುವರು. ಈ ಕೈಪಿಡಿಯನ್ನಾದರೂ ಎಲ್ಲರಿಗೂ ವಿಷಯವು ತಿಳಿಯಬೇಕೆಂಬ ಮುಖ್ಯ ಉದ್ದೇಶದಿಂದ ಬರೆಯಲಾಗಿದೆ. "ಪ್ರಸ್ತುತ ಪುಸ್ತಕದಲ್ಲಿ ಐದು ಪ್ರಕರಣಗಳಿವೆ. ಯಾವುದೇ ಒಂದು ಪತ್ಯ ಕ್ರಮಕ್ಕೆ ಒಳಪಡದೆ ಬ್ಯಾಂಕಿಂಗ್‌ಅನ್ನು ನೇರವಾಗಿ ಪ್ರಸ್ತಾಪಿಸಲಾಗಿದೆ. ಮೊದಲ ಪ್ರಕರಣದಲ್ಲಿ ಬ್ಯಾಂಕಿನ ಠೇವಣಿಗಳು, ವಿವಿಧ ರೀತಿಯ ಖಾತೆಗಳ ತೆರೆಯುವಿಕೆ, ಚಾಲ್ತಿ ಖಾತೆ, ನಗದುದ್ಧರಿ ಚೆಕ್/ಡ್ರಾಫ್ಟ್‌ಗಳ ವಸೂಲಿ ಇತ್ಯಾದಿಗಳನ್ನು ವಿವರಿಸಲಾಗಿದೆ.

ಮೊದಲ ಪ್ರಕರಣದಲ್ಲಿ ಠೇವಣಿ/ಖಾತೆಗಳ ಬಗ್ಗೆ ಇದ್ದರೆ ಎರಡನೆಯ ಪ್ರಕರಣದಲ್ಲಿ ಸಾಲದ ವಿವರಣೆ ವಿವಿಧ ವ್ಯವಹಾರ, ಹುಂಡಿ ವ್ಯವಹಾರ, ನಿರಾಧಾರ ಸಾಲಗಳನ್ನು ಪ್ರಸ್ತಾಪಿಸಲಾಗಿದೆ.

ಬ್ಯಾಂಕುಗಳ ಅಭಿಕರ್ತೃ ಸೇವೆ ಇತ್ಯಾದಿಗಳನ್ನು ಮೂರನೆಯ ಪ್ರಕರಣ ಒಳಗೊಂಡಿದೆ.

ನಾಲ್ಕನೆಯ ಪ್ರಕರಣದಲ್ಲಿ ಬ್ಯಾಂಕಿಂಗ್ ಇತಿಹಾಸವನ್ನು, ಅದರಲ್ಲೂ ವಾಣಿಜ್ಯ ಬ್ಯಾಂಕುಗಳ ಬಗ್ಗೆ, ನಮ್ಮ ದೇಶದಲ್ಲಿ ಪ್ರಾರಂಭವಾದ ಬ್ಯಾಂಕಿಂಗ್ ಸಂಸ್ಥೆಗಳ ಬಗ್ಗೆ, ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಇದಕ್ಕೆ ಪೂರಕವಾದ ಬ್ಯಾಂಕಿಂಗ್ ಕಂಪನಿಗಳ ಅಧಿನಿಯಮ (೧೯೪೯)ದ ಬಗ್ಗೆ—ಅದರಲ್ಲಿ ವಿವಿಧ ಪ್ರಕರಣಗಳ ಬಗ್ಗೆ-ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಈ ಕೃತಿ ೪೧ ವರ್ಷ ಹಿಂದೆ ಬರೆದದ್ದು. ಕೃತಿಕಾರ ಬಹಳ ವರ್ಷಗಳವರೆಗೆ ಮಹಾರಾಷ್ಟ್ರದಲ್ಲಿದ್ದುದರಿಂದ ಶೈಲಿಯಲ್ಲಿ ಅಲ್ಲಿಯ ಛಾಯೆಯಿದ್ದರೂ, ವಿಷಯ ಗ್ರಾಹ್ಯವಾಗುತ್ತದೆ. ಕೃತಿಕಾರರ ಅನುಭವ, ಅಧ್ಯಯನ ಹಾಗೂ ಜನಸಾಮಾನ್ಯರಿಗೆ ಬ್ಯಾಂಕಿಂಗ್‌ಅನ್ನು ತಿಳಿಸಬೇಕೆಂಬ ಹಂಬಲ ಇವು ಸ್ಪಷ್ಟವಾಗಿ ವ್ಯಕ್ತವಾಗಿವೆ. "ಈ ಕೈಪಿಡಿಯನ್ನಾದರೂ ಎಲ್ಲರಿಗೂ ವಿಷಯವು ತಿಳಿಯಬೇಕೆಂಬ ಮುಖ್ಯ ಉದ್ದೇಶದಿಂದ ಶಕ್ಯವಿದ್ದಮಟ್ಟಿಗೆ ಅತಿ ಸುಲಭ ಭಾಷೆಯಲ್ಲಿ ಬರೆಯಲಾಗಿದೆ ಮತ್ತು ಈ ಪುಸ್ತಕವು ಬ್ಯಾಂಕಿನ ವ್ಯವಹಾರ ಮಾಡುವವರಿಗೂ ಹಾಗು ಮಾಡಲಿಚ್ಛಿಸುವವರಿಗೂ ಸಹಾಯವಾಗಬೇಕೆಂಬುದೇ ನಮ್ಮ ಕೋರಿಕೆ" ಎಂಬ ಲೇಖಕರ ಆಶಯ ಈಡೇರಿದೆ. ಇಂದು ಬ್ಯಾಂಕಿಂಗ್ ಅತ್ಯಂತ ಪರಿವರ್ತನಶೀಲವಾದ ಚಟುವಟಿಕೆಯಾಗಿ ಸಾಕಷ್ಟು ಪ್ರಗತಿ ಸಾಧಿಸಿದ್ದರೂ ಅದಕ್ಕೆ ಅನುಗುಣವಾದ ವಾಙ್ಮಯ ನಮ್ಮಲ್ಲಿ ಸೃಷ್ಟಿಯಾಗಿಲ್ಲ. ಇಂಥ ಪರಿಸ್ಥಿತಿಯಲ್ಲಿ ಈ ಕೈಪಿಡಿ ಮಹತ್ವದ್ದಾಗಿದೆ. ಬ್ಯಾಂಕಿಂಗ್‌ನ ಮುಖ್ಯವಾದ ಕಾರ್ಯಭಾರಗಳನ್ನು ನೇರವಾಗಿ ವಿವರಿಸಲಾಗಿದೆ. ಲೇಖಕರು ಅಂದು ಲಭ್ಯವಿದ್ದ ಮಾಹಿತಿ, ಅಂದು ಬ್ಯಾಂಕುಗಳು ನಿರ್ವಹಿಸುತ್ತಿದ್ದ ಕಾರ್ಯಭಾರಗಳು, ಜೊತೆಗೆ ಸ್ವಾನುಭವವನ್ನು ಕೂಡಿಸಿ ಈ ಕೃತಿಯನ್ನು ರಚಿಸಿದ್ದಾರೆ.

ಬ್ಯಾಂಕಿಂಗ್ ನಮಗೆ ಆಮದಾಗಿ ಬಂದ ಚಟುವಟಿಕೆ. ಅದನ್ನು ನಮ್ಮ ಭಾಷೆಯಲ್ಲಿ ವ್ಯಕ್ತಪಡಿಸುವಾಗ ಅನೇಕ ಪಾರಿಭಾಷಿಕ ಸಮಾನ ಪದಗಳನ್ನು ಸೃಷ್ಟಿಸುವುದು ಲೇಖಕನಿಗೆ ಅನಿವಾರ್ಯವಾಗುತ್ತದೆ. ಕೆಂಭಾವಿಯವರ ಪ್ರಯತ್ನದಿಂದ ಅನೇಕ ಪಾರಿಭಾಷಿಕಗಳು ಸೃಷ್ಟಿಯಾಗಿ ಮುಂದಿನಂತಿವೆ.

Creditor : ಧನಕೊ
Debtor : ಋಣಕೊ
Joint Account : ಜೋಡು ಖಾತೆ
Token : ಪದಕ
Partnership Account : ಭಾಗೀದಾರರ ಖಾತೆ
Fixed Deposit : ಅವಧಿಯ ಇಡುಗಂಟು, ಮುದ್ದತಿ ಠೇವು
Current Account : ಬಳಕೆಯ (ಚಾಲ್ತಿ) ಖಾತೆ
Pledge form : ತಾರಣ ಪತ್ರ
Unencumbered : ಅಭಾದಿತ
Blank : ಕೋರಾ
Commercial Bank : ವ್ಯಾಪಾರಿ ಬ್ಯಾಂಕು
Godown : ವಖಾರ
Unsecured : ತಾರಣವಿಲ್ಲದ
Preference Shares : ಮೇಲ್ಪರದ ಭಾಗಗಳು
Land Mortgage Bank : ಹೊಲ ಒತ್ತಿ ಬ್ಯಾಂಕು
Reserve Bank of India : ಮಧ್ಯವರ್ತಿ ಬ್ಯಾಂಕು
Strong Room : ಭದ್ರವಾದ ಕೋಣೆ
Travellers Cheques : ಪ್ರವಾಸಿಗರ ಚೆಕ್ಸ್
Discount House: ಅಡತಿ ಅಂಗಡಿ (ಪೇಡಿ)
Pass Book : ಖಾತೆಯ ಪುಸ್ತಕ
Counterfoil : ಪ್ರತಿರೂಪ

ಬ್ಯಾಂಕಿಂಗ್ ಇಂದು ವೇಗವಾಗಿ ಬೆಳೆಯುತ್ತಿರುವಾಗ, ಅದಕ್ಕನುಗುಣವಾಗಿ ಕನ್ನಡದಲ್ಲಿ ಕೈಪಿಡಿಗಳು ಬರಬೇಕಾದ್ದು ಅಪೇಕ್ಷಣೀಯ. ಇಂಥ ಪ್ರಯತ್ನಗಳಿಗೆ ಕೆಂಭಾವಿಯವರ ಕೈಪಿಡಿಯೊಂದು ದಾರಿದೀಪ. ಅಷ್ಟು ಹಿಂದೆಯೇ ಒಂದು ಉತ್ತಮ ಕೈಪಿಡಿ ಬರೆದದ್ದು ಕನ್ನಡದ ಹೆಮ್ಮೆ. ●

ಲೇಖಕರು :
ಬಿಂದುರಾವ ರಾಘವೇಂದ್ರರಾವ ಕೆಂಭಾವಿ
ಪ್ರಕಾಶಕರು :
ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ
ಪ್ರಕಟಣೆ : ೧-೫-೧೯೫೧

**"ಭಾರತದ ಜೀವಾಳ ಹಳ್ಳಿಗಳು, ಪಟ್ಟಣಗಳಲ್ಲ.**
**ಹಳ್ಳಿಗರ ಬಡತನ ನಿರ್ಮೂಲನೆಗೊಳಿಸಿದ ದಿನವೇ ಸ್ವರಾಜ್ಯ ದೊರೆತ ದಿನ."** – ಮಹಾತ್ಮ ಗಾಂಧೀಜಿ

**ಸಮೃದ್ಧ ಬದುಕಿಗೆ ಸಮಗ್ರ ಕಾರ್ಯಕ್ರಮಗಳು:** ಭಾರತ ಸ್ವಾತಂತ್ರ್ಯ ಗಳಿಸಿದ 45 ವರ್ಷಗಳ ನಂತರವೂ ಮಹಾತ್ಮ ಗಾಂಧೀಜಿಯವರ ಭವ್ಯ ಭಾವನೆಗಳು ನಮಗೆ ಸತತ ಸ್ಫೂರ್ತಿ ಮತ್ತು ಪ್ರೇರಣೆಯನ್ನು ನೀಡುತ್ತಿವೆ. ಮಹಾತ್ಮ ಗಾಂಧೀಜಿಯವರ ಕನಸಿನ ಭಾರತವೆಂದರೆ ; ಅದು ''ಪರಸ್ಪರ ಸ್ವಾವಲಂಬಿಯಾದ ಸ್ವತಂತ್ರ ಪ್ರಜಾರಾಜ್ಯ'' ಎಂಬುದು ನಮಗೆಲ್ಲ ಮನದಟ್ಟಾಗಿದೆ. ಇದನ್ನರಿತೇ 1991ರ ಅಕ್ಟೋಬರ್ 2ರಂದು ಕರ್ನಾಟಕ ಸರ್ಕಾರ ''ವಿಶ್ವ'' ಎಂಬ ವಿನೂತನ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಕ್ಕೆ ತಂದಿದೆ. ಗ್ರಾಮೀಣ ಪ್ರದೇಶದ ಗುಡಿ ಕೈಗಾರಿಕೆಗಳಿಗೆ ಉತ್ತೇಜನ ನೀಡುವ ಮೂಲಕ ಗ್ರಾಮೀಣ ಅಭಿವೃದ್ಧಿಗೆ ನೆರವಾಗುವ ''ವಿಶ್ವ'' ಗ್ರಾಮೀಣ ಬಂಧುಗಳಿಗೆ ಸ್ಥಳೀಯವಾಗಿಯೇ ಉದ್ಯೋಗ ಕಲ್ಪಿಸಿ ಅವರು ಪಟ್ಟಣಗಳಿಗೆ ವಲಸೆ ಹೋಗುವುದನ್ನು ತಪ್ಪಿಸುವ ಗುರಿ ಹೊಂದಿದೆ. ಈ ದಿಶೆಯಲ್ಲಿ ಸರ್ಕಾರ ಗ್ರಾಮೀಣ ಯುವಕರಿಗೆ ತಮ್ಮ ಪರಂಪರಾಗತ ಕಸುಬು ಮತ್ತು ಕುಶಲ ಕಲೆಗಳಲ್ಲಿ ತರಬೇತಿ ನೀಡುವುದು, ಉತ್ಪಾದಿಸಿದ ವಸ್ತುಗಳಿಗೆ ಮಾರುಕಟ್ಟೆ ಸೌಲಭ್ಯ ಕಲ್ಪಿಸುವುದು ಹಾಗೂ ಅಂತಹ ಕಸುಬುಗಳನ್ನು ಕೈಗೊಳ್ಳಲು ಅಗತ್ಯವಾದ ಹಣಕಾಸಿನ ನೆರವು ಮತ್ತು ಇತರ ಪೂರಕ ಸೌಲಭ್ಯಗಳನ್ನು ಒದಗಿಸುವ ಕಾರ್ಯವನ್ನು ವ್ಯಾಪಕವಾಗಿ ಕೈಗೊಂಡಿದೆ. ನಮ್ಮ ಗ್ರಾಮಗಳು ಸ್ವಾವಲಂಬಿಯಾಗಬೇಕು. ತನ್ಮೂಲಕ ಮಹಾತ್ಮ ಗಾಂಧೀಜಿಯವರ ಬಲಿಷ್ಠ ಭಾರತ ನಿರ್ಮಾಣದ ಕಲ್ಪನೆಯನ್ನು ಸಾಕಾರಗೊಳಿಸಬೇಕು ಎಂಬುದೇ "ವಿಶ್ವ''ಯೋಜನೆಯ ಪರಮ ಗುರಿ.

**ಕಲಿಯಲು ಮುಕ್ತ ಅವಕಾಶ:** ಗ್ರಾಮೀಣ ಪ್ರದೇಶದ ಬಡವರ್ಗದ ಮಕ್ಕಳು ಶಾಲೆಗಳಿಗೆ ಕ್ರಮವಾಗಿ ಹಾಜರಾಗಿ ಕಲಿಯಲು ಅನುಕೂಲ ವಾಗುವಂತೆ ನಗದು ಹಣ ನೀಡಿಕೆಯ ಮೂಲಕ ಪ್ರೋತ್ಸಾಹ ತುಂಬುವ ''ಅಕ್ಷಯ'' ಯೋಜನೆಯಿಂದ ರಾಜ್ಯದ 30 ಲಕ್ಷ ಮಕ್ಕಳ ಶಿಕ್ಷಣಕ್ಕೆ ಮುಕ್ತ ಅವಕಾಶ ದೊರೆತಿದೆ.

**ಸ್ವಸ್ಥ ಜೀವನಕ್ಕೆ ನೆರವು:** ರಾಜ್ಯದ ಅದರಲ್ಲೂ ಗ್ರಾಮೀಣಪ್ರದೇಶದ ಜನರಿಗೆ ಆರೋಗ್ಯ ಜೀವನ ನೀಡುವ ''ಶುಶ್ರೂಷ'' ಒಂದು ಮಾದರಿ ಯೋಜನೆ. ಒಂದು ಕೋಟಿ ರೂಪಾಯಿ ವೆಚ್ಚದ ಈ ಕಾರ್ಯಕ್ರಮದಂತೆ ಎಲ್ಲ ನಾಗರಿಕರಿಗೂ ವರ್ಷಕ್ಕೆ ಎರಡು ಸಲ ಪುಕ್ಕಟೆ ವೈದ್ಯಕೀಯ ತಪಾಸಣೆಯ ಸೌಲಭ್ಯವಿದೆ. ಇದಲ್ಲದೆ ಸರ್ಕಾರ ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಸಾರ್ವತ್ರಿಕ ರೋಗನಿರೋಧಕ ಲಸಿಕೆ ಕಾರ್ಯಕ್ರಮವನ್ನು ಕೈಗೆತ್ತಿಕೊಂಡಿದೆ.

**ತಲೆಯ ಮೇಲೊಂದು ಸೂರು:** ''ಆಶ್ರಯ'' ಹೆಸರೇ ಹೇಳುವಂತೆ ಜನತೆಗೆ ನೆಲೆ ನೀಡುವ ಯೋಜನೆ. ಆಶ್ರಯ ಯೋಜನೆಯಲ್ಲಿ ಕರ್ನಾಟಕ ಸರ್ಕಾರ ರಾಜ್ಯದಾದ್ಯಂತ ಭೂರಹಿತ ಮತ್ತು ನಿವೇಶನರಹಿತರಿಗೆ ಐದು ಲಕ್ಷಕ್ಕೂ ಹೆಚ್ಚು ನಿವೇಶನಗಳನ್ನು ಹಂಚಿದೆ. ಇದಲ್ಲದೆ ಬೆಂಗಳೂರು ನಗರದ ಕೊಳಚೆ ನಿವಾಸಿಗಳಿಗೆ 30,000 ಮನೆಗಳನ್ನು ಹಾಗೂ ರಾಜ್ಯದ ಇತರ ಪಟ್ಟಣ ಪ್ರದೇಶಗಳ ಜನರಿಗೆ 30,000 ಮನೆಗಳನ್ನು ನಿರ್ಮಿಸಲಾಗುತ್ತಿದೆ. ಡಾ॥ ಅಂಬೇಡ್ಕರ್ ಶತಮಾನೋತ್ಸವದ ಅಂಗವಾಗಿ ರಾಜ್ಯದ ಪ್ರತಿಯೊಂದು ಬ್ಲಾಕ್‌ನಲ್ಲೂ 1000 ಮನೆಗಳು ಬರಲಿವೆ.

**ಆರಾಧನ:** ದುರ್ಬಲ ವರ್ಗದ ಜನರು ಅಧಿಕವಾಗಿರುವ ಪ್ರದೇಶಗಳಲ್ಲಿರುವ ಆರಾಧನ ಸ್ಥಳಗಳ ಪುನರುಜ್ಜೀವನ ಕಾರ್ಯವನ್ನು ''ಆರಾಧನ'' ಯೋಜನೆ ಕೈಗೊಂಡಿದೆ. ಇದುವರೆಗೆ ಈ ಉದ್ದೇಶಕ್ಕಾಗಿ ರಾಜ್ಯ ಸರ್ಕಾರ 5 ಕೋಟಿ ಹಣವನ್ನು ಬಿಡುಗಡೆ ಮಾಡಿದೆ.

**ಅಭಿವೃದ್ಧಿ ಕಾರ್ಯಗಳಿಗೆ ಅಧಿಕ ವಿದ್ಯುತ್:** ಅಭಿವೃದ್ಧಿ ಕಾರ್ಯಗಳಿಗೆ ಅಧಿಕ ವಿದ್ಯುತ್ ಪೂರೈಸುವ ಸಲುವಾಗಿ ಶಾಖೋತ್ಪನ್ನ ಮತ್ತು ಜಲವಿದ್ಯುತ್ ಯೋಜನೆಗಳನ್ನು ಸ್ಥಾಪಿಸುವ ಒಂದು ಬೃಹತ್ ಯೋಜನೆಯನ್ನು ರಾಜ್ಯ ಸರ್ಕಾರ ಸಿದ್ಧಪಡಿಸಿದೆ. ವಿದ್ಯುತ್ ಉತ್ಪಾದನೆ ಹಾಗೂ ಪೂರೈಕೆಗೆ ವಿದೇಶೀ ಸಂಸ್ಥೆಗಳೂ ಸೇರಿದಂತೆ ಖಾಸಗಿ ಕಂಪೆನಿಗಳು ಹಾಗೂ ಅನಿವಾಸಿ ಭಾರತೀಯರನ್ನು ರಾಜ್ಯ ಸರ್ಕಾರ ಆಹ್ವಾನಿಸಿದೆ. ವಿದ್ಯುತ್ ಕ್ಷೇತ್ರದ ಅಭಿವೃದ್ಧಿಗೆ ದೊಡ್ಡ ಪ್ರಮಾಣದ ವಿದೇಶೀ ಬಂಡವಾಳವನ್ನು ನಿರೀಕ್ಷಿಸಲಾಗಿದೆ.

**ಕೃಷಿ ಕ್ಷೇತ್ರಕ್ಕೆ ಒತ್ತಾಸೆ:** ರಾಜ್ಯದಲ್ಲಿ ಕೃಷಿ ಕ್ಷೇತ್ರದ ಪ್ರಗತಿಗೆ ಪ್ರಥಮ ಪ್ರಾಶಸ್ತ್ಯ ನೀಡಲಾಗಿದೆ. ಕೃಷಿ ಕಾರ್ಯಗಳನ್ನು ಸುಧಾರಿಸಿ ಉತ್ಪಾದನೆ ಯನ್ನು ಅಧಿಕಗೊಳಿಸುವ ವಿವಿಧೋದ್ದೇಶ ಹಾಗೂ ತೀವ್ರ ಕಾರ್ಯಕ್ರಮಗಳು ವ್ಯಾಪಕವಾಗಿ ಅನುಷ್ಠಾನಗೊಳ್ಳುತ್ತಿವೆ. ಇದಕ್ಕಾಗಿ ಕೊಡಮಾಡಿರುವ ಹಣ 153.32 ಕೋಟಿ ರೂಪಾಯಿ. ರಾಜ್ಯದ ನೀರಾವರಿ ಸಾಮರ್ಥ್ಯವನ್ನು ಗುರುತಿಸಿ ಬಳಸುವ ಕಾರ್ಯ ಮುನ್ನಡೆದಿದೆ. ''ಕೆರೆ ಕಲ್ಯಾಣ'' ಯೋಜನೆಯಲ್ಲಿ ಕೈಗೊಂಡಿರುವ ಕೆರೆಗಳ ದುರಸ್ತಿ ಮತ್ತು ಅಭಿವೃದ್ಧಿ ಸಣ್ಣ ನೀರಾವರಿ ಕೃಷಿಗೆ ನೆರವಾಗಿದೆ. ಬರ ಪರಿಹಾರ ಕಾಮಗಾರಿಗಳಿಗೆ 1991–92ರಲ್ಲೂ ರೂ. 78 ಕೋಟಿ ವೆಚ್ಚಮಾಡಿದೆ. 1992–93ರಲ್ಲಿ ಈವರೆಗೆ ರೂ 14.56 ಕೋಟಿ ಬಿಡುಗಡೆ ಮಾಡಲಾಗಿದೆ.

**ಹಳ್ಳಿ ಹಳ್ಳಿಗೂ ಕುಡಿಯುವ ನೀರು:** ರಾಜ್ಯದಲ್ಲಿ ಪ್ರತಿ ಗ್ರಾಮಕ್ಕೂ ಈಗ ಕುಡಿಯುವ ನೀರು ಪೂರೈಸಲಾಗಿದೆ. ಕರ್ನಾಟಕ ಸರ್ಕಾರದ ಒಟ್ಟಾರೆ ಸಾಧನೆಗೆ ಯೋಜನಾ ಆಯೋಗವು ಮೆಚ್ಚುಗೆ ವ್ಯಕ್ತಪಡಿಸಿದೆ.

**ಅಸಂಘಟಿತ ಕಾರ್ಮಿಕರಿಗೆ ಆಸರೆ:** ಕರ್ನಾಟಕ ಸರ್ಕಾರವು ಕೈಗೆತ್ತಿಕೊಂಡಿರುವ ''ಗುಂಪು ವಿಮಾ ಯೋಜನೆ'' ಹಾಗೂ ಅಸಂಘಟಿತ ಕಾರ್ಮಿಕ ವರ್ಗಕ್ಕೆ ನೆರವಾಗುವ ''ಕಲ್ಯಾಣ ನಿಧಿ'' ಆಟೋರಿಕ್ಷಾ ಚಾಲಕರು, ಕ್ಷೌರಿಕರು, ಹಣ್ಣುಹಂಪಲು ಮಾರುವವರು, ಕೂಲಿಕಾರರು ಮುಂತಾದ ಅಸಂಘಟಿತ ದುಡಿಮೆಯ ವರ್ಗಕ್ಕೆ ಸಾಮಾಜಿಕ ಭದ್ರತೆಯನ್ನು ಒದಗಿಸಿದೆ.

**ಹನಿ ನೀರೂ ಅಮೂಲ್ಯ:** ಕ್ರಿ.ಶ. 2000ದ ಹೊತ್ತಿಗೆ ರಾಜ್ಯದ ಒಟ್ಟು ನೀರಾವರಿ ಸಾಮರ್ಥ್ಯದ 55 ಲಕ್ಷ ಹೆಕ್ಟೇರ್ ಭೂಮಿಯನ್ನು ನೀರಾವರಿಗೊಳಪಡಿಸುವ ಗುರಿಯನ್ನು ಇಟ್ಟುಕೊಳ್ಳಲಾಗಿದ್ದು ಈ ವರ್ಷ ನೀರಾವರಿ ಅಭಿವೃದ್ಧಿಗಾಗಿ 588 ಕೋಟಿ ರೂಪಾಯಿ ತೆಗೆದಿರಿಸಲಾಗಿದೆ. ಅತಿ ವೇಗದಿಂದ ಕ್ಷೀಣಿಸುತ್ತಿರುವ ಪ್ರಾಕೃತಿಕ ಸಂಪನ್ಮೂಲವನ್ನು ಸಂರಕ್ಷಿಸುವ ಸಲುವಾಗಿ ಸರ್ಕಾರ ಕೈಗೊಂಡಿರುವ ಮತ್ತೊಂದು ವಿಶಿಷ್ಟ ಯೋಜನೆ ''ಹನಿತನಿ''. ನೀರಿನ ಸಮರ್ಥ ಬಳಕೆಗಾಗಿ ಆಧುನಿಕ ನೀರಾವರಿ ಪದ್ಧತಿಗಳನ್ನು ಅಳವಡಿಸುವ ರೈತರಿಗೆ ಉತ್ತೇಜನ ನೀಡುವುದು ''ಹನಿತನಿ'' ಯೋಜನೆಯ ಗುರಿ.

**ಅಗತ್ಯ ವಸ್ತುಗಳ ಪೂರೈಕೆ:** ರಾಜ್ಯದಾದ್ಯಂತ 17,795 ನ್ಯಾಯಬೆಲೆ ಅಂಗಡಿಗಳ ಮೂಲಕ ನಾಗರಿಕರಿಗೆ ಅಗತ್ಯ ವಸ್ತುಗಳನ್ನು ವಿತರಣೆ ಮಾಡಲಾಗುತ್ತಿದೆ. ಇವುಗಳಲ್ಲಿ 13,111 ನ್ಯಾಯಬೆಲೆ ಅಂಗಡಿಗಳು ಗ್ರಾಮೀಣ ಪ್ರದೇಶಗಳಲ್ಲೂ 4684 ಅಂಗಡಿಗಳು ಪಟ್ಟಣ ಪ್ರದೇಶಗಳಲ್ಲೂ ಕಾರ್ಯವೆಸಗುತ್ತಿವೆ. ರಾಜ್ಯದಲ್ಲಿ ಒಟ್ಟು 81,18,223 ಕುಟುಂಬ ಪಡಿತರ ಕಾರ್ಡುಗಳಿವೆ. ಇವುಗಳಲ್ಲಿ 58,18,223 ಕಾರ್ಡುಗಳು ಗ್ರಾಮೀಣ ಪ್ರದೇಶಗಳಲ್ಲೂ 22,92,821 ಕಾರ್ಡುಗಳು ಪಟ್ಟಣ ಪ್ರದೇಶದಲ್ಲೂ ಇವೆ.

**ಗುಡ್ಡಗಾಡು ಜನರಿಗೆ ಪಡಿತರ ಪೂರೈಕೆ:** ಗುಡ್ಡಗಾಡು ಜನರ ಮನೆಬಾಗಿಲಿಗೇ ಅಗತ್ಯ ವಸ್ತುಗಳನ್ನು ಪೂರೈಸುವ ಸಂಚಾರಿ ನ್ಯಾಯಬೆಲೆ ವಾಹನಗಳ ಏರ್ಪಾಡು ರಾಜ್ಯ ಸರ್ಕಾರ ಕೈಗೊಂಡಿರುವ ಮತ್ತೊಂದು ಮಾದರಿ ಕಾರ್ಯಕ್ರಮವಾಗಿದೆ.

**ಶಾಂತಿ-ಸೌಹಾರ್ದ:** ಮತೀಯ ಸೌಹಾರ್ದಕ್ಕೆ ಕರ್ನಾಟಕ ಹೆಸರಾದ ರಾಜ್ಯ. ಈ ಪರಂಪರೆಗೆ ಕುಂದು ಬರದಂತೆ ರಾಜ್ಯದಲ್ಲಿ ಶಾಂತಿ-ಸೌಹಾರ್ದತೆ ಯನ್ನು ಕಾಪಾಡಿಕೊಂಡು ಕರ್ನಾಟಕ ಸರ್ಕಾರ ಹೊಣೆಯರಿತು ಶ್ರಮಿಸುತ್ತಿದೆ.

**ಭಾರತದ 46ನೆಯ ಸ್ವಾತಂತ್ರ್ಯ ದಿನದಂದು ಮಹಾತ್ಮ ಗಾಂಧೀಜಿಯವರು ಕನಸು ಕಂಡ ಸದೃಢ ಮತ್ತು ಜಾತ್ಯತೀತ ಸ್ವತಂತ್ರ ಭಾರತದ** ಕಲ್ಪನೆಯನ್ನು ಕರ್ನಾಟಕ ಸರ್ಕಾರ ಸಾಕಾರಗೊಳಿಸುತ್ತಿದೆ. ಅದಕ್ಕೆ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಸಮರ್ಪಣಾ ಭಾವದಿಂದ ಮುಂದುವರಿಯುತ್ತಿದೆ.

**ಬಡವರ ಮತ್ತು ದುರ್ಬಲ ವರ್ಗದವರ ಏಳಿಗೆಗೆ ಬದ್ಧ.** **– ಕರ್ನಾಟಕ ವಾರ್ತೆ**

